

Chandamama, April '51

Photo by N. Ramakrishna

ದೇವಾರಾಧನೆ



ವಿಜಯ ರವರ

# ಪಾತಾಳಭೈರವಿ

ನಿರ್ದೇಶಕರು... K.V.ರೆಡ್ಡಿ, B.Sc(HONS)

Produced by... NAGIREDDI & CHAKRAPANI

## ಚಂದಾದಾರರಿಗೆ ಸೂಚನೆಗಳು

★ ಚಂದಮಾಮಾ ಮಾಸಪತ್ರಿಕೆಯು ಪ್ರತಿ ತಿಂಗಳ ಮೊದಲನೆಯದಿನ ಪ್ರಕಟವಾಗುವುದು. ಒಡನೆಯೇ ಚಂದಾದಾರರಿಗೆ ಪೋಸ್ಟು ಮುಖಾಂತರ ಕಳಿಸಲಾಗುವುದು. ಯಾರಿಗಾದರೂಪ್ರತಿಯು ಸಕಾಲದಲ್ಲಿ, ಹೆಚ್ಚೆಂದರೆ 7 ನೇ ತಾರೀಖಿನೊಳಗೆ ತಲಪದಿದ್ದಲ್ಲಿ ಕೂಡಲೇ ಸಂಬಂಧಪಟ್ಟ ಸ್ಥಳೀಯ ಪೋಸ್ಟ್ ಅಫೀಸಿನಲ್ಲಿ ವಿಚಾರಿಸಿ ಆಮೇಲೆ ನಮಗೆ ತಡಮಾಡದೆ ತಿಳಿಸಬೇಕು.

★ ಅಂತಹ ದೂರು ನಮ್ಮ ಕೈಗೆ ಆಯಾತಿಂಗಳ 10 ನೇ ತಾರೀಖಿನೊಳಗೆ ತಲಪಬೇಕು. ತಡವಾಗಿ ಬಂದ ಪತ್ರಗಳನ್ನು ಗಮನಿಸಲಾಗುವುದಿಲ್ಲ.

★ ಚಂದಾದಾರರು ಬರೆಯುವ ಯಾವ ಪತ್ರದಲ್ಲೇ ಆಗಲೀ ತಮ್ಮ ಚಂದಾ ಸಂಖ್ಯೆಯನ್ನು ಸ್ಪಷ್ಟವಾಗಿ ನಮೂದಿಸಿರಬೇಕು. ಇದು ಬಹಳ ಮುಖ್ಯ. ತಮ್ಮ ಚಂದಾ ಸಂಖ್ಯೆ ನಮೂದಿಸದೆ ಬರೆಯುವ ಚಂದಾದಾರರ ಪತ್ರಗಳನ್ನು ಗಮನಿಸುವುದು ಸಾಧ್ಯವಿಲ್ಲ.

★ ಅಂತಹ ಚಂದಾ ಸಂಖ್ಯೆ ಪ್ರತಿಚಂದಾದಾರರಿಗೂ ಅವರ ಚಂದಾ ಹಣ ಸಂದಬಗ್ಗೆ ಬರೆದ ಕಾರ್ಡಿನಲ್ಲೂ, ಅವರಿಗೆ ಪ್ರತಿಸಲ ಕಳಿಸುವ ಚಂದಮಾಮದ ಸುತ್ತು ಕಾಗದದ ಮೇಲೂ ಬರೆಯಲ್ಪಟ್ಟಿರುತ್ತೆ.

★ ನಾವು ಪ್ರತಿಯನ್ನು ಅಂಚೆಮೂಲಕ ಕಳಿದಮೇಲೆ ಅವು ಚಂದಾದಾರರನ್ನು ಸೇರದಿದ್ದರೆ ಅದಕ್ಕೆ ನಾವು ಜವಾಬ್ದಾರರಲ್ಲ. ಆದರೆ ಚಂದಾದಾರರು ಅವಶ್ಯವಿದ್ದಷ್ಟು ಹೆಚ್ಚು ಹಣ ಕೊಟ್ಟು ಸರ್ಟಿಫಿಕೇಟ್ ಆಫ್ ಪೋಸ್ಟಿಂಗ್ ನಲ್ಲಿಯಾಗಲೀ ರಿಜಿಸ್ಟರ್ಡ್ ಪೋಸ್ಟಿನಲ್ಲಾಗಲಿ ಪ್ರತಿ ತರಿಸಿಕೊಳ್ಳಬಹುದು.

CHANDAMAMA

## ಚಂದಮಾಮ

★

ವಾರ್ಷಿಕ ಚಂದಾ

ರೂ. ೪-೮-೦

ಎರಡು ವರ್ಷ ಚಂದಾ

ರೂ. ೮-೦-೦

★

CHANDAMAMA OFFICE

P. B. 1686 : MADRAS — 1

## ಆಂಧ್ರಾ ಇನ್ಸೂರೆನ್ಸ್ ಕಂಪೆನಿ, ಲಿಮಿಟೆಡ್

**ಹೆಡ್ ಆಫೀಸು :: ಮಚಲೀಪಟ್ಟಣ.**

ವಿಮಾ ವ್ಯಾಪಾರದಲ್ಲಿ **25** ಸಂವತ್ಸರಗಳು ಜಯಪ್ರದವಾಗಿಯೂ ಸಮರ್ಥತೆಯಿಂದಲೂ ಸೇವೆ ಸಲ್ಲಿಸಿದ ಸಂಸ್ಥೆ.

1950 ರಲ್ಲಿ ನೂತನ ವ್ಯಾಪಾರ .... 2 ಕೋಟಿ. ರೂ. ಗಳು.
ಒಟ್ಟು ವಿಮಾ ನಿಧಿ (ಸುಮಾರು) .... 1 ಕೋಟಿ 80 ಲಕ್ಷ. ರೂ. ಗಳು.

ಜೀವ ವಿಮೆ ಮಾತ್ರವಲ್ಲದೆ - ಅಗ್ನಿ - ಮೋಟಾರು ಪ್ರಮಾದ - ನೌಕಾ - ವಿಮಾವ್ಯಾಪಾರಗಳೂ ನಮಲ್ಲಿ ಉಂಟು.

ನಮ್ಮ ಆಫೀಸುಗಳು

ಮದ್ರಾಸು, ಬೊಂಬಾಯಿ, ಕಲ್ಕತ್ತಾ, ನಾಗಪುರ, ದೆಹಲಿ, ಬೆಂಗಳೂರು, ಬೆಳಗಾಂ, ಅನಂತಪುರ, ಸಿಕಂದರಾಬಾದ, ಕೊಯಮುತ್ತೂರು, ಬರ್ಹಾಂಪುರ, ಎರ್ನಾಕುಲಂ, ಬೆಜವಾಡ, ಗುಂಟೂರು, ಜಂಶೀದಪುರ, ವಿಶಾಖಪಟ್ಟಣ, ರಾಜಮಹೇಂದ್ರ, ಮಂಗಳೂರು, ದಿಬ್ರುಗರ್, (ಅಸ್ಸಾಂ).

---

**ಐ. ಟಿ. ಎಲ್. ಗ್ರೈಪ್ ಸಿರಪ್**

ನಿಮ್ಮ ಮುದ್ದು ಕಂದನ
ಅಜೀರ್ಣ ವ್ಯಾಧಿಗಳನ್ನು ತಡೆದು
ಆರೋಗ್ಯ ಕಾಪಾಡುವ ಅಮೃತಪಾನ

ತಯಾರಕರು :

ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್ ಲ್ಯಾಬೊರೇಟರಿ ಲಿಮಿಟೆಡ್.

ಮಲ್ಲೇಶ್ವರಂ ಪೋಸ್ಟ್, ಬೆಂಗಳೂರು 3



ಶ್ರೇಷ್ಠತೆಯ ಹೆಗ್ಗುರುತು




**ಗ್ರೈಪ್ ಸಿರಪ್**



## ಈ ಸಂಚಿಕೆಯಲ್ಲಿ



---

ಇವಲ್ಲದೆ ಹಿಗಟು, ಪದ್ಯ, ಚುಟಕ ಮುಂತಾದುವು ಗಳನೇಕ.

వస్తోంది!

అలవిమాలిన పంతాలు
అలవోకగా నెగ్గించిన
బిడువరాని జాణతనం!



వినోదా వారి

# స్త్రీ సాహసము

అంజలీదేవి..నాగేశ్వరరావు...సూర్యప్రభ...సి.యస్.ఆర్.
శివరావు...రేలంగి...గిరిజ...సి.వరలక్ష్మి...రామమూర్తి...శేషారావ్
సదాశివరావు...అన్నపూర్ణ...విజయలక్ష్మి...

దర్శకత్వము...
**వేదాంతం రాఘవయ్య**

రచన, పర్యవేక్షణ... సముద్రాల...

సంగీతం
సుబ్బరామన్

ఛాయాగ్రహణం
రంగా

కళ
వాలి & గోడగాంకర్



MATA

ఆంధ్ర, సీడెడ్, నైజాం :
**పూర్ణా రిలీజు**

మైసూర్ :
**అమృత పిక్చర్సు**

## ಲೇಖಕರಿಗೆ ಸೂಚನೆಗಳು

★ ಸಣ್ಣ ಪುಟ್ಟ ಕತೆ, ಕವನ, ಲೇಖನಗಳಿಗೆ ಸರ್ವದಾ ಸ್ವಾಗತವುಂಟು.

★ ಲೇಖನಗಳು ಚಂದಮಾಮದ ಘನತೆಗೆ ತಕ್ಕಂತಹವುಗಳಿರಬೇಕು.

★ ಚಂದಮಾಮದ ಎರಡು ಪುಟಗಳನ್ನು ಮಿೀರುವಂತಹ ಲೇಖನಗಳನ್ನು ಸದ್ಯದಲ್ಲಿ ಸ್ವೀಕರಿಸುವುದಿಲ್ಲ. ದಯವಿಟ್ಟು ಉದ್ದವಾದ ಲೇಖಗಳನ್ನು ಯಾರೂ ಮುಂದೆ ನಾವು ತಿಳಿಸುವವರಿಗೆ ಕಳಿಸಬಾರದು.

★ ಲೇಖನಗಳನ್ನು ಸರಳ ಸ್ಪಷ್ಟವಾಗಿ ಬರೆದು ಕಳಿಸಬೇಕು. ಇತರ ಕನ್ನಡ ಪತ್ರಿಕೆ, ಪುಸ್ತಕಗಳಲ್ಲಿ ಪ್ರಕಟವಾದಂತಹ ಲೇಖನಗಳನ್ನು ನಮಗೆ ಬರೆದು ಕಳಿಸಬಾರದು.

★ ಇತರ ಭಾಷೆಗಳಿಂದ ಅನುವಾದಮಾಡಿ ನಮಗೆ ಕಳಿಸಬಹುದು. ಆದರೆ ಹಾಗೆ ಬರೆದವರು ಮೂಲವನ್ನು ಸ್ಪಷ್ಟವಾಗಿ ನಮಗೆ ತಿಳಿಸಬೇಕು.

★ ಬಾಲಕ ಬಾಲಕಿಯರು ಬರೆದ ಕತೆ, ಕವನಗಳನ್ನು ತಾವು ಸ್ವಂತವಾಗಿ ರಚಿಸಿದುದೋ, ಅಥವಾ ಹಿರಿಯರ ಸಹಾಯದಿಂದ ರಚಿಸಿದುದೋ, ಅಥವಾ ತಮ್ಮ ಅಜ್ಜಿ ಅಜ್ಜಂದಿರು ಅಥವಾ ಇತರರಾರಾದರೂ ಹೇಳಿದುದನ್ನು ಕೇಳಿದುದೋ, ಅಥವಾ ಎಲ್ಲಾದರೂ ಓದಿದ್ದರ ಆಧಾರದಿಂದ ಹೊಸದಾಗಿ ರಚಿಸಿದುದೋ ಎಂಬ ವಿಷಯವನ್ನು ಸ್ಪಷ್ಟವಾಗಿ ಬರೆದು ನಮಗೆ ತಿಳಿಸಬೇಕು.

★ ಲೇಖಕರ ಪತ್ರವೂ ಲೇಖನದ ಜೊತೆಯಲ್ಲಿಯೇ ಇಟ್ಟಿರಬೇಕು. ಅಂತಹ ಪತ್ರಗಳು ಬೇರೆಯಾಗಿ ಬಂದರೆ ಗಮನಕ್ಕೆ ಬರಲಾರವು.

★ ಕಳುಹಿಸಿದ ಲೇಖನಗಳು ಪ್ರಕಟನೆಗೆ ಯೋಗ್ಯವಿದ್ದು, ಸ್ವೀಕೃತವಾದಲ್ಲಿ ನಮ್ಮಲ್ಲಿ ಇಟ್ಟುಕೊಳ್ಳುವೆವು. ಇಲ್ಲದಿದ್ದಲ್ಲಿ ಸ್ವಲ್ಪಕಾಲಾನಂತರ ನಾಶಪಡಿಸುವೆವು.

★ ಅಸ್ವೀಕೃತವಾದಲ್ಲಿ ಲೇಖನವನ್ನು ಹಿಂದಕ್ಕೆ ಪಡೆಯಬೇಕಾದರೆ ಅದಕ್ಕೆ ಬೇಕಾಗುವ ಅಂಚೆ ಚೀಟನ್ನು ಲೇಖನದೊಡನೆಯೇ ಕಳುಹಿಸ ಬೇಕಾದುದು ಅಗತ್ಯ.

★ ಅಂಚೆ ಚೇಟು ಇಟ್ಟೊ, ನಿಮ್ಮ ಲೇಖನಗಳು ೨ ತಿಂಗಳ ಅವಧಿಯೊಳಗೆ ಹಿಂದಕ್ಕೆ ಬರದಿದ್ದಲ್ಲಿ ಆ ಲೇಖನಗಳು ಸ್ವೀಕೃತವೆಂದು ಲೇಖಕರು ತಿಳಿಯಬೇಕು.

★ ಪ್ರತಿಯೊಬ್ಬ ಲೇಖಕರೂ ಪ್ರತಿಯೊಂದು ಲೇಖನದ ಕೊನೆಯಲ್ಲೂ ತಮ್ಮ ಸಂಪೂರ್ಣ ವಿಳಾಸವನ್ನು ಕನ್ನಡದಲ್ಲಿ ಬರೆದು ಕಳುಹಬೇಕು. ವಿಳಾಸವನ್ನು ಕನ್ನಡ ಮತ್ತು ಇಂಗ್ಲೀಷು ಎರಡು ಭಾಷೆಗಳಲ್ಲೂ ಬರೆದಿದ್ದರೆ ಉತ್ತಮ.

★ ಲೇಖನದೊಂದಿಗೆ ಇಟ್ಟ ಪತ್ರವಲ್ಲದೆ ಆಮೇಲೆ ಲೇಖನದ ವಿಚಾರವಾಗಿ ಬರೆದ ಪತ್ರಗಳನ್ನು ಗಮನಿಸುವುದಿಲ್ಲ. ವೃಥಾ ಪತ್ರ ವ್ಯವಹಾರ ಕೂಡದು.

★ ಲೇಖನಗಳ ವಿಚಾರಕ್ಕಲ್ಲದೆ ಸಲಹೆ, ಸೂಚನೆಗಳ ವಿಚಾರವಾಗಿ ಪತ್ರ ವ್ಯವಹಾರ ಮಾಡುವವರು ಉತ್ತರಕ್ಕೆ ಸಾಕಷ್ಟು ಅಂಚೆ ಚೀಟನ್ನು ಇಡಬೇಕು.

★ ನಮಗೆ ಕಳಿಸುವ ಕವರಿನಮೇಲೆ ನಮ್ಮ ವಿಳಾಸನವನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆದು ಕಳಿಸಬೇಕು. ಇಲ್ಲದಿದ್ದರೆ ಕಳೆದು ಹೋಗುವ ಸಂಭವವುಂಟು.

★ ಸ್ವೀಕರಿಸಲ್ಪಟ್ಟ ಲೇಖನಗಳು ಕೂಡಲೇ ಪ್ರಕಟವಾಗುವುದೆಂದು ತಿಳಿಯಬಾರದು ಅವಕಾಶವಿದ್ದಂತೆ ಪ್ರಕಟಿಸಲಾಗುವುದು.

ಚಂದಮಾಮ.
















# 500 ರೂಪಾಯಿಗಳ ಬಹುಮಾನ

## ಉಮಾ ಗೋಲ್ಡ್ ಕವರಿಂಗ್ ವರ್ಕ್ಸ್

ಉಮಾ ಮಹಲ್ : : ಮಚಲೀಪಟ್ಟಣ

ಉಮಾ ಗೋಲ್ಡ್ ಕವರಿಂಗ್ ವರ್ಕ್ಸ್ ಪೋಸ್ಟಾಫೀಸ್ ಅಪ್ಪಟ ಬಂಗಾರದ ರೇಕನ್ನು ಲೋಹದ ಮೇಲೆ ಅಂಟಿಸಿ (Gold Sheet Welding on Metal) ತಯಾರು ಮಾಡುತ್ತೇವೆ. ಅಲ್ಲವೆಂದು ರುಜುವಾತು ಮಾಡಿದವರಿಗೆ ರೂ. 500 ಬಹುಮಾನ ಕೊಡುತ್ತೇವೆ. ನಾವು ತಯಾರಿಸಿ ಕಳಿಸುವ ಪ್ರತಿ ವಸ್ತು ಮತ್ತು ಪ್ಯಾಕಿಂಗಿನ ಮೇಲೆ "ಉಮಾ" ಎಂಬ ಇಂಗ್ಲೀಷು ಅಕ್ಷರದ ಗುರುತನ್ನು ನೋಡಿ ತೆಗೆದುಕೊಳ್ಳಿ. ಹತ್ತು ವರ್ಷಗಳ ಗ್ಯಾರಂಟಿಯುಂಟು.

ಇದನ್ನು ಪರೀಕ್ಷೆ ಮಾಡಲಿಚ್ಛಿಸುವವರು ಉಮಾ ಆಭರಣಗಳನ್ನು ಮಹಾ ದ್ರಾವಕದಲ್ಲಿ ಇಟ್ಟ 5 ನಿಮಿಷದಲ್ಲೇ ಬಂಗಾರದ ರೇಕು ಲೋಹದಿಂದ ಬೇರೆಯಾಗಿ ಬರುತ್ತದೆ. ಹೀಗೆ ಪರೀಕ್ಷೆ ಮಾಡಿದ ಅನೇಕ ಮಹನೀಯರು ನಮಗೆ ಸರ್ಟಿಫಿಕೇಟುಗಳನ್ನು ಕೊಟ್ಟಿರುವರು. 800 ಡಿಸೈನುಗಳುಳ್ಳ ನಮ್ಮ ಕ್ಯಾಟಲಾಗು ಉಚಿತವಾಗಿ ಕಳುಹಿಸುತ್ತೇವೆ.

ಇತರ ದೇಶಗಳಿಗೆ ಕ್ಯಾಟಲಾಗು ದರಕ್ಕೆ 25% ಅಧಿಕ ಬೆಲೆಯಾಗುತ್ತೆ.

N.B.- ವಸ್ತುಗಳ ವಿ. ಪಿ. ಪಾರ್ಸಲು ಛಾರ್ಜು ರೂ. 0-5-0

Tel : "UMA" Masulipatam.



ಈಗ ದೊರಕುತ್ತೆ!!

ಅಮೆರಿಕನ್ ಮಾಡೆಲ್ ರೋಲ್ ಫಿಲಿಮ್ ಬಾಕ್ಸು ಕೆಮೆರಾ

ಒಳ್ಳೆಯ ಪವರು ಲೆನ್ಸೂ ಮತ್ತು ವ್ಯೂಫೈಂಡರ ನೊಡಗೂಡಿರುವ ಅತ್ಯುತ್ತಮವಾದ ಈ ಕೆಮೆರಾ ಬಹಳ ಅಗ್ಗ. ಅಭ್ಯಾಸಿಗರು ಸಹ ಉತ್ತಮ ರೀತಿಯಲ್ಲಿ ಉಪಯೋಗಿಸಬಹುದು. ನಂ. 120 ಫಿಲಿಂನಲ್ಲಿ 2¼"×3¼" ಸೈಜಿನ ಅದ್ಭುತ ಫೋಟೋಗಳನ್ನು ತೆಗೆಯಬಹುದು. ಫೋಟೋ ತೆಗೆಯುವ ವಿಧಾನದೊಂದಿಗೆ ಬೆಲೆ ರೂ. 10-8-0 ಪ್ಯಾಕಿಂಗ್ ಪೋಸ್ಟೇಜುಗಳಿಗೆ ರೂ. 1-8-0 ಪ್ರತ್ಯೇಕ. ಕೆಮೆರಾಗೆ ಸರಿಪಡುವಂತಹ ಲೆದರ್ ಕೇಸ್, ರೂ. 3-0-0. ಸರಕು ಸ್ವಲ್ಪ ಮಾತ್ರವಿದೆ. ಇಂದೇ ಆರ್ಡರ್ ಕೊಡಿರಿ.

ಪತ್ರ ವ್ಯವಹಾರ ಇಂಗ್ಲಿಷಿನಲ್ಲಿ.

**BENGAL CAMERA HOUSE (108 C.M.)**

**P. O. 21. ALIGARH (U. P.)**

# ಮಿತ್ರಾಂಜನ




ಮಿತ್ರ ಫಾರ್ಮಸಿ -ತೆನಾಲಿ

# ಮುಖಚಿತ್ರ

ವಿದರ್ಭ ದೇಶವನ್ನಾಳುತ್ತಿದ್ದ ಭೀಷ್ಮಕ ಮಹಾರಾಜನಿಗೆ ರುಕ್ಮಿಣಿಯೆಂಬ ಮಗಳಿದ್ದಳು. ಆಕೆ ಅತಿ ಸುಶೀಲೆ, ಚತುರ ಗುಣಿ, ಸುಂದರಿ. ಆಕೆಗೆ ಯುಕ್ತವಯಸ್ಸು ಬಂದಾಗ ವಿವಾಹ ವಿಷಯ ಕುರಿತು ವಿವಾದವೇರ್ಪಟ್ಟಿತು. ಸರಳ ಹೃದಯನಾದ ಭೀಷ್ಮಕನಿಗೆ ರುಕ್ಮಿಣಿಯನ್ನು ಅನುರೂಪನಾದ ಕೃಷ್ಣನಿಗೆ ಕೊಡಬೇಕೆಂದು ಅಭಿಮತ. ಆದರೆ ರುಕ್ಮಿಣಿಯ ಅಣ್ಣಂದಿರಾದ ರುಕ್ಮಿ ಮೊದಲಾದವರಿಗೆ ಕೃಷ್ಣನ ಹೆಸರೆತ್ತಿದರೆ ಆಗದು. ಆದುದರಿಂದ ಚೇದಿ ರಾಜನಾದ ಶಿಶುಪಾಲನಿಗೆ ಕೊಡಬೇಕೆಂದು ಅವರ ಮತ. ರುಕ್ಮಿಣಿಯಾದರೋ ಕೃಷ್ಣನ ಕಲ್ಯಾಣಗುಣಗಳನ್ನೂ ರೂಪ, ಶೌರ್ಯಾದಿ ಅತಿಶಯಗಳನ್ನೂ ಕೇಳಿ ಕೃಷ್ಣನೇ ತನ್ನ ಪತಿಯೆಂದು ನಿರ್ಧರಿಸಿ ಹಗಲಿರಳೂ ಆತನ ಧ್ಯಾನದಲ್ಲಿಯೇ ಕಾಲ ಕಳೆಯುತ್ತಿದ್ದಳು. ಆದರೆ ಬಲಿಷ್ಠರಾದ ಅಣ್ಣಂದಿರು ಶಿಶುಪಾಲನೊಡನೆ ವಿವಾಹ ನಡೆಸಲು ನಿಶ್ಚಯಿಸಿ ಸಕಲ ಸಿದ್ಧತೆಗಳನ್ನೂ ಮಾಡುತ್ತಿದ್ದರು. ಹೀಗಿರಲು ರುಕ್ಮಿಣಿಯ ಪಾಡೇನು! ಆಕೆ ಅತಿ ದುಃಖಿತಳಾಗಿ ತನಗೆ ಆಪ್ತನಾದ ಅಗ್ನಿದ್ಯೋತನೆಂಬ ಬ್ರಾಹ್ಮಣನನ್ನು ರಹಸ್ಯವಾಗಿ ಬರಮಾಡಿ "ವಿಪ್ರೋತ್ತಮಾ! ಇಂತಹ ಆಪತ್ತಿನಲ್ಲಿ ನೀನೇ ಸಹಾಯಕ. ನೀನು ಕೂಡಲೇ ದ್ವಾರಕಿಗೆ ಹೋಗಿ ಶ್ರೀ ಕೃಷ್ಣನನ್ನು ಕಂಡು, ಆತನನ್ನೇ ಪತಿಯನ್ನಾಗಿ ಭಾವಿಸಿರುವ ರುಕ್ಮಿಣಿಯನ್ನು ಈ ಸಂಕಟದಿಂದ ಪಾರುಮಾಡಿ ಕರೆದುಕೊಂಡು ಹೋಗೆಂದು ಹೇಳು. ಅದಕ್ಕೆ ಸುಸಮಯವೆಂದರೆ ವಿವಾಹಪೂರ್ವ ನಾನು ಅಂಬಿಕಾಲಯಕ್ಕೆ ಹೋಗಿ ದೇವಿ ಪೂಜೆಯನ್ನು ಮುಗಿಸಿ ಹಿಂತಿರುಗುವ ವೇಳೆಯೇ ಎಂದು ಹೇಳು. ಯಾಕೆಂದರೆ ಆಗ ವೃಥಾ ಯುದ್ಧ ತಪ್ಪಬಹುದು. ಹಾಗೂ ಎದುರು ಬಿದ್ದವರೊಡನೆ ಯುದ್ಧಮಾಡಲು ಸಿದ್ಧತೆಗಳೊಡನೆಯೂ ಬರಹೇಳು. ಆಗ ನನ್ನನ್ನು ಕೊಂಡೊಯ್ದು ರಾಕ್ಷಸ ವಿವಾಹವನ್ನು ಮಾಡಿಕೊಳ್ಳಬೇಕೆಂದೂ ಉದಾಸೀನ ಮಾಡಿದರೆ ಕೃಷ್ಣನ ಧ್ಯಾನದಲ್ಲೇ ಪ್ರಾಣ ಬಿಡುವೆನೆಂದು ತಿಳಿಸಿದೆನೆಂದೂ ಹೇಳು. ಜಾಗ್ರತೆ." ಎಂದು ರಾಯಬಾರವನ್ನು ಕಳಿಸಿದಳು.

ಇಲ್ಲಿ ರುಕ್ಮಿಣಿಯ ಮನಸ್ಸು ಹೇಗೆ ಕಾತುರಪಡುತ್ತಿದ್ದಿತೋ! ಅದೇ ರೀತಿ ದ್ವಾರಕಿಯಲ್ಲಿ ಕೃಷ್ಣನೂ ರುಕ್ಮಿಣಿಯ ಮೇಲೆಯೇ ಮನಸ್ಸಿಟ್ಟು ಯೋಚಿಸುತ್ತಿದ್ದನು. ಅಗ್ನಿದ್ಯೋತನು ತಂದ ಸುದ್ದಿಕೇಳಿದೊಡನೆಯೇ ಆನಂದಭರಿತನಾಗಿ ಆತನನ್ನು ಸಕಲ ವಿಧಗಳಿಂದ ಸತ್ಕರಿಸಿದನು. ಸಕಲ ಸಿದ್ಧತೆಯಿಂದ ಆ ವಿಪ್ರನೊಡನೆ ರಥದಲ್ಲಿ ಹೊರಟು ರಾಜಧಾನಿಯಾದ ಕುಂಡಿನಪುರಕ್ಕೆ ಬಂದನು.

ಈ ರಹಸ್ಯರಾಯಬಾರವನ್ನು ಕಳಿಸಿದಾಗಿನಿಂದ ರುಕ್ಮಿಣಿಯ ಮನಸ್ಸು ಅನೇಕ ಯೋಚನೆಗಳಿಂದ ತಹತಹಿಸುತ್ತಿತ್ತು—ಅಷ್ಟಕ್ಕೂ ಕೃಷ್ಣನು ತನ್ನನ್ನು ಪ್ರೀತಿಸುವನೋ ಇಲ್ಲವೋ; ಆತನು ಬರದಿದ್ದರೇನು ಮಾಡುವುದು; ಆತನು ತನ್ನ ವಿಷಯದಲ್ಲಿ ಏನಭಿಪ್ರಾಯ ಪಡುವನೋ, ವಿವಾಹ ಮುಹೂರ್ತ ಸಮಿಾಪಿಸುತ್ತಿದೆ; ಕೃಷ್ಣನ ಸುದ್ದಿಯಾಗಲೀ, ಕಳಿಸಿದ ಬ್ರಾಹ್ಮಣನ ಸುಳಿವಾಗಲೀ ಕಾಣಿಸಲಿಲ್ಲವಲ್ಲಾ ಎಂದು ಕಳವಳ ಪಡುತ್ತಿದ್ದಳು. ಇನ್ನೇನು ವಿವಾಹದ ದಿನ ಅಂಬಿಕಾಲಯಕ್ಕೆ ಹೊರಡಬೇಕೆಂದಿರುವಾಗ ಅಗ್ನಿದ್ಯೋತನು ಥಟ್ಟನೆ ಕಾಣಿಸಿಕೊಳ್ಳಲು ಆಕೆಯ ಆನಂದಕ್ಕೆ ಮೇರೆಯೇ ಇಲ್ಲವಾಯಿತು. ಆತನಿಂದ ಕೃಷ್ಣಾಗಮನವನ್ನು ಅರಿತು ಪ್ರಸನ್ನ ಚಿತ್ತಳಾಗಿ ಸಕಲ ಪರಿವಾರದೊಡನೆ ಕಾಲುನಡೆಯಲ್ಲಿಯೇ ದೇವಾಲಯಕ್ಕೆ ಹೋಗಿ ಅಂಬಿಕಾದೇವಿಗೆ ಭಕ್ತಿಯಿಂದ ಪೂಜೆಗಳನ್ನು ನೆರವೇರಿಸಿದಳು. ಮತ್ತು ಕೃಷ್ಣನನ್ನೇ ಧ್ಯಾನಿಸುತ್ತಾ ಆತನ ಆಗಮನವನ್ನೇ ನಿರೀಕ್ಷಿಸುತ್ತಾ ಪರಿವಾರದೊಡಗೂಡಿ ಹಿಂತಿರುಗಿ ವಿವಾಹ ಮಂಟಪದಕಡೆಗೆ ನಡೆದು ಬರುತ್ತಿದ್ದಳು.

ಸಂಪುಟ ೬
ಸಂಚಿಕೆ ೪

ಏಪ್ರಿಲ್
೧೯೫೧

# ಚಂದಮಾಮ

★

## ಸೋದರರ ಹಾಡು

★

ಒಂದೇ ನಮಗೆಲ್ಲರಿಗಾಕಾಶ
ನಾವೆಯೊಂವರಲಿ ನಮ್ಮಯ ವಾಸ!
ಒಂದೇ ದೀಪವು ನಮಗಾಗಿಹುದು
ಒಂದೇ ಹಾಸಿಗೆ ನಮಗಿರುತಿಹುದು!
ಕಷ್ಟ ಸುಖಗಳಾ ಕಾರಣವೊಂದೇ
ಪಾಪ ಪುಣ್ಯಗಳ ಫಲವಿಹುದೊಂದೇ
ನಮ್ಮನೆಲ್ಲರನು ಒಬ್ಬನೆ ಕಾವನು
ನಾವಾಗಿರುವೆವು ಸೋದರರು!

[ಅವ್ಮೆಂಬಳ ಅನಂತಯ್ಯ ನಾವಡ]





# ಯುಗಾದಿ

★

ಬಂತು ಬಂತು ಬಂತು ಬಂತು
ಬಂತು ಹೊಸ ಯುಗ
ಅರಳಿತರಳಿತರಳಿತೆಲ್ಲ
ಜಗದ ನಾಲ್ಮೊಗ

★

ತಳಿರ ಬುಟ್ಟಿಯಲ್ಲಿ ಅಲರ
ಹೊತ್ತು ತರುತಿದೆ
ಚಿಟ್ಟೆದುಂಬಿ ಹಾಡಿ ಹಾರಿ
ಮುತ್ತನಿಡುತಿದೆ

★

ಯುಗದ ಆದಿ ಹೂವ ತೇರ
ನೇರಿ ಬರುತಿದೆ
ಹೊಸ ಹೊಂಗನಸ ಹೊಸೆದು
ಜಸವ ತರುತಿದೆ

★

ಕ್ರಾಂತಿ ಪಡೆದ ನಾಡಿಗಿನ್ನು
ಕಾಂತಿ ತರುತಿದೆ
ಮುದದಿ ಬಂದು ಶಾಂತಿಮಧುವ
ಸುರಿಸಿ ಹರಸಿದೆ

★

'ಸತ್ಯ ನುಡಿಯು, ಧರ್ಮನಡತೆ'
ಮೂಲ ಮಂತ್ರವ
ಭರತ ಪುತ್ರರೆಲ್ಲರೆದೆಗೂ
ಬಿತ್ತಿ ಬರುತಿದೆ

★

ಬೇವು ಬೆಲ್ಲ ಮೆದ್ದರೇನು?
ಬಾಳು ಬೆಲ್ಲವಾಗಲಿ
ಜಗದ ಮನೋ ಭಾವ ಶಾಂತಿ
ಸಮತೆಯೆಡೆಗೆ ಸಾಗಲಿ

—ಚಿರಂತನ, ಶುಕ್ರವಾರಸಂತೆ.

## ★ ಹೂವಾಡಿಗಿತ್ತಿ ★

(ಅಭಿನಯಗೀತೆ)

ಹೂ ಬೇಕೇನಮ್ಮ
ಹೂ ಬೇಕೆ ಹೂ....
ನಸುಕಿಲಿ ಕೊಯ್ದು
ಕಟ್ಟಿದ ಹೂ....

ಚೆಂದದಿ ನೈದ
ಮಲ್ಲಿಗೆ ಹೂ....

ಸೊಗಸಿಲಿ ಸುರಿದ
ಸೇವಂತಿ ಹೂ....

ಇದು ಈಗಿನ ಫ್ಯಾಶನ್
ಕೆಂಜಾಜಿ ಹೂ....

ಹಲವಾರು ರೀತಿಯ
ಗುಲಾಬಿ ಹೂ....

ಈಕಡೆ ನೋಡಿರಿ
ಸಂಪಿಗೆ ಹೂ....

ಆಕಡೆ ನೋಡಿರಿ
ಮಂದಾರ ಹೂ....

ಬಹು ಅಗ್ಗದರ ನೋಡಿ
ಕೊಳ್ಳಿರವ್ವ ಹೂ....
ಹೂ ಬೇಕೆ ಹೂ ಬೇಕೆ
ಹೂ ಬೇಕೆ ಹೂ....

—ಹ. ರಾ. ಕಿದಿಯೂರು

## ಜಾಣತನ

ಒಂದು ಅಡವಿಯಲ್ಲಿ ಒಂದು ನರಿ ಇತ್ತು. ಅದು ಅಲ್ಲಿ ಸುಖವಾಗಿ ವಾಸಿಸುತ್ತಿತ್ತು. ಒಂದು ದಿವಸ ಅದರ ಬಾಲದಲ್ಲಿ ಒಂದು ಚಿಕ್ಕಾಡವು (ಸೊಳ್ಳೆ) ಹೊಕ್ಕು ಕಡಿಯ ಹತ್ತಿತು. ಎಷ್ಟು ಬಾಲ ಜಾಡಿಸಿದರೂ ಅದು ಹೋಗಲಿಲ್ಲ. ಕೊನೆಗೆ ಉಪಾಯಶಾಲಿಯಾದ ನರಿಯು ಬಾಯಿಯಲ್ಲಿ ಒಂದು ಕಟ್ಟಿಗೆಯನ್ನು ಕಚ್ಚಿಕೊಂಡು ಒಂದು ಕೊಳ್ಳದಲ್ಲಿ ಇಳಿದು ಹೊರಟಿತು. ಮೊದಲು ಅದರ ಬಾಲವು ನೀರಲ್ಲಿ ಮುಳುಗಿತು. ಆಗ ಚಿಕ್ಕಾಡು ಹಾರಿ ಬೆನ್ನಿನಮೇಲೆ ಬಂತು. ಮತ್ತಷ್ಟು ಮುಂದಕ್ಕೆ ಹೋಗಲು ನರಿಯ ಬೆನ್ನೂ ಸಹ ಮುಳುಗಿತು. ಆಗ ಸೊಳ್ಳೆ ನರಿಯ ತಲೆಯ ಮೇಲೆಬಂತು. ನರಿ ಮತ್ತಷ್ಟು ಮುಂದಕ್ಕೆ ಹೋಗಲು ತಲೆಯೂಮುಳುಗಿತು. ಬಳಿಕ ಚಿಕ್ಕಾಡವು ಬಾಯಿಯಲ್ಲಿ ಹಿಡಿದಿದ್ದ ಕಟ್ಟಿಗೆಯ ಮೇಲೆ ಬಂತು. ಕೂಡಲೇ ನರಿಯು ಕಟ್ಟಿಗೆಯನ್ನು ತೇಲಿಬಿಟ್ಟುಬಿಟ್ಟು ದಡಕ್ಕೆ ಓಡಿ ಬಂತು. ಚಿಕ್ಕಾಡವು ಕಟ್ಟಿಗ ಮೇಲೆ ಉಳಿಯಿತು. ಕಟ್ಟಿಗೆ ನೀರಲ್ಲಿ ತೇಲಿಕೊಂಡು ಹೋಯಿತು. ನರಿಯ ಜಾಣತನ ನೋಡಿದಿರಾ?

—ಎಸ್. ಬಿ. ನವಲಗುಂದ

### ಹಾವುಬುಟ್ಟಿ ಕೊರೆವುದುಂಟೆ ?

—ನವಗಿರಿನಂದ.

ತಿರುಕ ಹಾವುಗಾರನೊಬ್ಬ ತಿರುಗಿ ತಿರುಗಿ ಅಲ್ಲಿ ಇಲ್ಲಿ
ಇರುಳು ಒಂದು ಮುರುಕು ಗುಡಿಗೆ ಹೋಗಿ ಮಲಗಿದ;
ಹಾವ ಬುಟ್ಟಿ ಬಳಿಯಲಿಟ್ಟು ನಿದ್ದೆಮಾಡಿದ.
ಬುಟ್ಟಿಯೊಳಗೆ ಒಂದು ತುಂಡು ರೊಟ್ಟಿ ಒಂದು ತಟ್ಟೆಲಿತ್ತು;
ಪುಟ್ಟದೊಂದು ಇಲಿಗೆಬಂತು ರೊಟ್ಟಿ ಪರಿಮಳ.
ಬುಟ್ಟಿಯನ್ನು ಕೊರೆಯಿತಾಗ ನೆಟ್ಟು ಹಲುಗಳ.
ಕೊರೆದು ತೂತು ಒಳಗೆ ತೂರೆ, ಉರಗ ಇಲಿಯಮೇಲೆ ಹಾರಿ
ತ್ವರದಿ ಗುಳುಮನುಂಗಿ ಒಡನೆ ಹೊರಗೆ ಹರಿಯಿತು!
ಇಲಿ ಕೊರೆದಾ ತೂತಿನಿಂದ ಹೊರಟೆ ಹೋಯಿತು!
ಹಾವುಗಾರ ಎದ್ದುನೋಡಿ ಹಾವು ಹೋದ ತೂತು ನೋಡಿ
" ಹಾವು ಬುಟ್ಟಿ ಕೊರೆದು ಹೋಯಿತಲ್ಲ!" ಎಂದನು.
‘ ಹಾವು ಬುಟ್ಟಿ ಕೊರೆವುದುಂಟೆ ?—ನೀನು ಹೇಳೇನು ?’

 

# ಗರ್ವ



ಒಂದಾನೊಂದು ಕಾಡಿನಲ್ಲಿ ಒಂದು ನರಿಯಿತ್ತು ಅದಕ್ಕೆ ಅನೇಕ ಉಪಾಯಗಳು ಗೊತ್ತಿದ್ದುವು. ಆದರೆ ಎಲ್ಲರಿಗಿಂತಲೂ ತಾನು ಬಹಳ ಜಾಣನೆಂದು ಅದಕ್ಕೆ ಬಹಳ ಗರ್ವವೂ ಇತ್ತು. ಅದು ಒಂದು ದಿನ ದಾರಿಯಲ್ಲಿ ಹೋಗುತ್ತಾ ಒಂದು ಕಾಡು ಬೆಕ್ಕನ್ನು ಕಂಡಿತು.

ನರಿಯು ಸುಮ್ಮನಿರದೆ ಅದೂ ಇದೂ ಮಾತಾಡುತ್ತಾ, "ಬೆಕ್ಕಣ್ಣ, ಬೆಕ್ಕಣ್ಣ, ನಿನಗೆ ಎಷ್ಟು ಉಪಾಯಗಳು ಗೊತ್ತಿವೆ?" ಎಂದು ಕೇಳಿತು. ಬೆಕ್ಕ ಇದೇಕೆ ಹೀಗೆ ಕೇಳುವುದೆಂದು ಬೆರಗಾಗಿ "ಅಣ್ಣಾ! ನನಗೊಂದೇ ಒಂದು ಉಪಾಯ ಗೊತ್ತಿದೆ." ಎಂದು ಸುಮ್ಮನಾಯಿತು.

ನರಿಯು ಅಟ್ಟಹಾಸದಿಂದ ನಕ್ಕು "ಅಯ್ಯೋ, ಇಷ್ಟೇನೇ? ಪಾಪ! ನಿನ್ನಂತಹವನು ಇಂತಹ ಕಾಡಿನಲ್ಲಿರಲು ಸಾಧ್ಯವಿಲ್ಲ. ನನಗೆ ನೋಡು, ನೂರೊಂದು ಉಪಾಯಗಳು ಗೊತ್ತಿವೆ. ನಿನಗಿಂತ ನಾನು ಎಷ್ಟೋ ಮೇಲಲ್ಲವೆ?" ಎಂದು ಜಂಭದಿಂದ ಹೇಳಿತು. ಬೆಕ್ಕು ನಾಚಿಕೆಯಿಂದ "ನರಿಯಣ್ಣ, ನನಗೂ ಆ ಉಪಾಯಗಳನ್ನು ಹೇಳಿಕೊಡುವೆಯಾ?" ಎಂದು ಕೇಳಿತು. ನರಿಯು "ಆಗಲಿ, ಬಾ" ಎಂದು ಬೆಕ್ಕನ್ನು ಕರೆದುಕೊಂಡು ಹೋಗುತ್ತಿರುವಾಗ ಬೇಟೆಗಾರರು ಬರುತ್ತಿರುವುದು ಕಂಡಿತು.

ನರಿಯಣ್ಣನಿಗೆ ಎಷ್ಟೋ ಉಪಾಯ ಗೊತ್ತಿದ್ದರೂ ಬೇಟೆ ನಾಯಿಗಳಮುಂದೆ ಅದೊಂದೂ ಸಾಗುವುದಿಲ್ಲವೆಂದು ಗೊತ್ತು. ಬೆಕ್ಕು ಬೇಟೆ ನಾಯಿಗಳನ್ನು ಕಂಡೊಡನೆ ತಟಕ್ಕನೆ ಮರವನ್ನೇರಿ ಮೇಲೆ ಕುಳಿತುಬಿಟ್ಟಿತು. ಆದರೆ ನರಿಯು ಭಯದಿಂದ ಕಂಗಾಲಾಗಿ ಓಡಿ ಪೊದೆಗಳಿಗೆ ನುಗ್ಗುತ್ತಿರುವಲ್ಲೇ ಬೇಟೆನಾಯಿಗಳು ಹಿಂಬಾಲಿಸಿ ನರಿಯನ್ನು ಹಿಡಿದು ಬಿಟ್ಟವು.

ಆಗ ಬೆಕ್ಕು ಸಾಯುತ್ತಿದ್ದ ನರಿಯನ್ನು ಕುರಿತು "ಏನಣ್ಣಾ, ಎಷ್ಟು ಉಪಾಯಗಳಿದ್ದರೇನು? ನನ್ನ ಒಂದು ಉಪಾಯದ ಮುಂದೆ ಅದೆಲ್ಲಾ ನಿರರ್ಥಕವಾಯಿತು. ಆದುದರಿಂದ ಗರ್ವ ಪಡಬಾರದು" ಎಂದು ಹೇಳಿ ಹೋಯಿತು.

—ಪಿ. ಜಿ. ಕೆ. ಭಂಡಾರಿ, ಮಂಗಳೂರು —ಎಂ. ಟಿ. ರಾಮಸ್ವಾಮಿ, ಮಲ್ಲೇಶ್ವರ.




'ತರಡೋಕೆ' ಗ್ರಾಮದಲ್ಲಿ ಗೋರಾ ಎಂಬ ಒಬ್ಬ ಕುಂಬಾರನಿದ್ದನು. ಅವನು ಭಕ್ತಶ್ರೇಷ್ಠ. ಯಾವುದೇ ಕೆಲಸ ಮಾಡುವಾಗಲೂ ಪಾಂಡು ರಂಗವಿಠಲನ ಸ್ಮರಣೆ ಮಾಡುತ್ತಿದ್ದನು. ಆತನ ಕೀರ್ತಿಯನ್ನು ಕೇಳಿ ದೇಶದೇಶಗಳಿಂದ ಭಕ್ತಾದಿಗಳೆಷ್ಟೋ ಮಂದಿ ಆತನನ್ನು ನೋಡಲು ಬರುತ್ತಿದ್ದರು.

ಇಂತಹ ಭಕ್ತರ ಒಂದು ಗುಂಪಿನವರು ಒಂದು ದಿನ ಆತನ ಮನೆಗೆ ಬಂದಿಳಿದರು. ಆ ಭಕ್ತರಿಗೆ ಬೇಕಾದ ಎಲ್ಲಾ ಸೌಕರ್ಯ ಗಳನ್ನು ಒದಗಿಸಿದ ತರುವಾಯ ಗೋರಾ ತನ್ನ ಆವಿಗೆಯ ಹತ್ತಿರಹೋಗಿ ಅಲ್ಲಿ ಸುಟ್ಟು ತಣ್ಣಗೆ ಆಗಿದ್ದ ಒಂದೊಂದೇ ಮಡಕೆಯನ್ನು ತೆಗೆದು ತನ್ನ ಮರದ ಚಕ್ಕೆಯಿಂದ ಮೆಲ್ಲನೆ ತಟ್ಟಿ, ಪರೀಕ್ಷಿಸಿ, ಪಕ್ಕದಲ್ಲಿಡುತ್ತಿದ್ದನು.

ಬಂದ ಭಕ್ತಾದಿಗಳೆಲ್ಲಾ ಆತನಮನೆಯಲ್ಲಿ ಊಟ ಮುಗಿಸಿದ ನಂತರ ತಮ್ಮ ತಮ್ಮ ಪಾಡಿಗೆ ಹಾಯಾಗಿ ಮಲಗಿಕೊಂಡರು.

ಆದರೆ ಅವರಲ್ಲಿ ಒಬ್ಬನು ಮಾತ್ರ ಹಾಗೆ ವಿಶ್ರಾಂತಿ ಹೊಂದದೆ ಗೋರನ ಹತ್ತಿರಕ್ಕೆ ಹೋಗಿ ಕುಳಿತುಕೊಂಡು "ಏಕಪ್ಪಾ, ಹಾಗೆ ಒಂದೊಂದೇ ಮಡಕೆಯನ್ನು ತಟ್ಟಿ ನೋಡು ತ್ತಿರುವೆ?" ಎಂದು ಕೇಳಿದನು.

"ಈ ಮಡಕೆಗಳೆಲ್ಲಾ ಚೆನ್ನಾಗಿ ಸುಟ್ಟಿರು ತ್ತವೋ ಇಲ್ಲವೋ ಪರೀಕ್ಷೆ ಮಾಡುತ್ತಿದ್ದೇನೆ" ಎಂದನು ಗೋರಾ.

ಆಗ ಭಕ್ತನು "ಮಹಾತ್ಮಾ, ನಾನೂ, ಇಲ್ಲಿ ವಿಶ್ರಮಿಸಿಕೊಳ್ಳುತ್ತಿರುವ ಈ ಭಕ್ತಾದಿ ಗಳೂ ಸಹ ಆ ಗಡಿಗೆಗಳಂತಹವರೆ! ನಮ್ಮಲ್ಲಿ ಸಹ ಕೆಲವು ಸುಡದ ಮಡಿಕೆಗಳಿರಬಹುದು. ಅಂತಹವರು ಯಾರೋ ಪರೀಕ್ಷಿಸಿ ತಿಳಿದು ಕೊಂಡು ಜ್ಞಾನ ಬೋಧಿಸಿ ಪಕ್ವಮಾಡಿ" ಎಂದು ಪ್ರಾರ್ಥಿಸಿದನು.

ಈ ಮಾತು ಕೇಳಿ ಗೋರಾ "ಅಣ್ಣಾ, ಈ ಭಕ್ತರಲ್ಲಿ ಯಾರಿಗೋ ಇನ್ನೂ ಪರಿ ಪೂರ್ಣ ಜ್ಞಾನ ಲಭಿಸಿಲ್ಲವೆಂಬ ಕಾರಣ, ಆತನಿಗೆ ಕೃಪೆತೋರಿಸುವ ಸಲುವಾಗಿಯೇ ನಿನ್ನ ಬಾಯಿಂದ ಆ ಪಾಂಡುರಂಗವಿಠಲನು ಈ ಮಾತು ನುಡಿಸಿದ್ದಾನೆ. ಆ ಅಪಕ್ವ ಘಟ ಯಾರೋ ನೋಡೋಣ, ಬಾ"

ಟಿ. ಅನಂತನಾರಾಯಣ, ಹರಿಹರ.



ಯಾಗಿ ನುಡಿದು ಮತ್ತೆ ತನ್ನ ಆವಿಗೆಯ ಹತ್ತಿರ ಹೊರಟು ಹೋದನು.

ನಾಮದೇವನು ಹೆಸರು ವಾಸಿಯಾದ ಮಹಾ ಭಕ್ತರಲ್ಲಿ ಒಬ್ಬನು. ಅಸಲು ಆತನು ಹುಟ್ಟುವಾಗಲೇ 'ವಿಠಲ್! ವಿಠಲ್!! ಪಾಂಡುರಂಗವಿಠಲ್!'' ಎಂದು ಭಗವನ್ನಾಮಸ್ಮರಣೆ ಮಾಡುತ್ತಾ ಜನಿಸಿದಾತ. ಆತನು ಜನಿಸಿದಾರಭ್ಯ ಆ ದೇವರ ಪಾದ ಸೇವೆಯಲ್ಲೇ ಕಾಲ ಕಳೆಯುತ್ತಿದ್ದ. ಅಂತಹವನನ್ನು 'ಅಪಕ್ವಘಟ' ಎಂದು ಹೇಳಿದರೆ ನ್ಯಾಯವೇ?

ತನಗೆ ತುಂಬಾ ಅವಮಾನವಾಯಿತೆಂದು ತೋರಿತು ನಾಮದೇವನಿಗೆ. ಒಂದು ನಿಮಿಷವಾದರೂ ಅವರ ನಡವೆ ನಿಲ್ಲಲಾರದೆ ಆತನು ಅಲ್ಲಿಂದ ನೆಟ್ಟಗೆ ಪಂಡರೀಪುರಕ್ಕೆ ಹೋಗಿ, ಪಾಂಡುರಂಗನ ಪಾದಗಳ ಮೇಲೆಬಿದ್ದು, "ಸ್ವಾಮಿ, ನನ್ನನ್ನು ಗೋರಾ ತುಂಬಾ ಅವಮಾನ ಪಡಿಸಿದ್ದಾನೆ. ನನಗೆ ಪರಿಪೂರ್ಣ ಜ್ಞಾನವುಂಟಾಗಿಲ್ಲವಂತೆ. ಭಕ್ತಾದಿಗಳೆಲ್ಲರ ಮಧ್ಯ ನನ್ನನ್ನು ನಗೆಪಾಟಲಿಗೆ ಗುರಿಮಾಡಿದ್ದು ತರವೇ ಪ್ರಭೂ'' ಎಂದು ವಿಲಪಿಸಿದನು.

ಪಾಂಡುರಂಗಸ್ವಾಮಿ ನಸುನಕ್ಕು "ನಾಮದೇವ್, ನಿನಗೇನೂ ಅವಮಾನವಾಗಲಿಲ್ಲ. ನೀನು ಅಪಕ್ವಘಟವೆಂಬ ಮಾತು ಸುಳ್ಳೇನಲ್ಲ. ನಿನಗೆ ಸಂಪೂರ್ಣ ಜ್ಞಾನ ಲಭಿಸಬೇಕು" ಎಂದನು. "ಅದು ನಿಜವೋ ಪ್ರಭೊ ಹಾಗಿದ್ದ ಪಕ್ಷಕ್ಕೆ ಆ ಸಂಪೂರ್ಣ ಜ್ಞಾನವನ್ನು ನನಗೆ

ಎಂದು ಮರದ ಚಕ್ಕೆಯೊಂದಿಗೆ ಒಳಗೆ ಬಂದನು.

ಆಗತಾನೇ ಭಕ್ತರೆಲ್ಲರೂ ನಿದ್ದೆಯಿಂದ ಎಚ್ಚೆತ್ತು ಆಕಳಿಸುತ್ತಿದ್ದರು. ಗೋರಾ ಒಬ್ಬೊಬ್ಬರ ನೆತ್ತಿಯ ಮೇಲೂ ಮರದ ಚೆಕ್ಕೆಯಿಂದ ಒಂದೊಂದು ಏಟು ಹಾಕುತ್ತಾ ಮುಂದೆ ನಡೆಯುತ್ತಿದ್ದನು.

ಆವರು ಯಾರೂ ಕಿಮಕ್‌ಕಮಕ್ ಎನ್ನಲಿಲ್ಲ. ಕಡೆಯಲ್ಲಿ ಕುಳಿತಿದ್ದ ನಾಮದೇವನೆಂಬ ಭಕ್ತನು ಮಾತ್ರ ತಲೆಗೆ ಕೈಯನ್ನು ಅಡ್ಡ ಮಾಡಿ "ಏನಯ್ಯಾ ಗೋರಾ, ನಿನ್ನ ಮನೆಗೆ ಅತಿಥಿಗಳಾಗಿ ಬಂದರೆ ನಮ್ಮನ್ನು ಹೊಡೆಯುತ್ತಿರುವೆಯಲ್ಲಾ, ಏನಿದು?" ಎಂದನು.

ಅದಕ್ಕೆ ಗೋರಾ "ಈ ನಾಮದೇವನೇ ಅಪಕ್ವಘಟ'' ಎಂದು ಎಲ್ಲರ ನಡುವೆ ಗಟ್ಟಿ



ಪ್ರಸಾದಿಸು" ಎಂದ ನಾಮದೇವ. ಆಗ ಪಾಂಡುರಂಗನು "ಒಬ್ಬ ಸದ್ಗುರುವನ್ನು ಆಶ್ರಯಿಸದ ಹೊರತು ನಿನಗೆ ಸಂಪೂರ್ಣ ಜ್ಞಾನ ವುಂಟಾಗಲಾರದು ನಾಮದೇವ್.... ನಾಗನಾಥ ಸ್ವಾಮಿಯ ಆಲಯದಲ್ಲಿ ವೀಸೋಬಾಕೇಶನೆಂಬ ಮಹಾ ಭಕ್ತನೊಬ್ಬ ನಿದ್ದಾನೆ. ಆತನಿಗೆ ಶುಶ್ರೂಷೆಮಾಡಿ ಪಕ್ವ ಘಟವಾಗಿ ಬರಬೇಕು" ಎಂದನು.

ದೇವರ ಅಪ್ಪಣೆಯ ಪ್ರಕಾರ ನಾಮದೇವ ನಾಗನಾಥಸ್ವಾಮಿಯ ಆಲಯದ ಹತ್ತಿರ ಹೋಗಿ ವಿಚಾರಣೆ ಮಾಡಲು ವೀಸೋಬಾ ಕೇಶನು ದೇವರ ಸನ್ನಿಧಿಯಲ್ಲಿರುವಂತೆ ತಿಳಿಯ ಬಂತು. ಒಳಗೆ ಹೋಗಿ ನೋಡಲು ಲಿಂಗ ರೂಪದಲ್ಲಿದ್ದ ನಾಗನಾಥಸ್ವಾಮಿಯ ಮೇಲೆ ತನ್ನೆರಡು ಪಾದಗಳನ್ನಿಟ್ಟು, ಗೊರಕೆ ಹೊಡೆ ಯುತ್ತಾ ನಿದ್ದೆ ಮಾಡುತ್ತಿದ್ದ ವೀಸೋಬಾ ಕೇಶ ಕಾಣಿಸಿದ! ನಾಮದೇವನು ದಿಗ್ಭ್ರಾಂತ ನಾಗಿ "ಅರೆ, ಭಗವಂತನ ತಲೆಯ ಮೇಲೆ ಕಾಲಿಟ್ಟು ನಿದ್ದೆ ಹೋಗುವ ಈ ಅಯೋಗ್ಯ ನಿಗೆ ನಾನು ಶಿಷ್ಯವೃತ್ತಿ ಮಾಡಬೇಕೇ?" ಎಂದುಕೊಂಡು, ಸುಮ್ಮನಿರಲಾರದೆ ವೀಸೋಬಾಕೇಶನನ್ನು ನಿದ್ದೆಯಿಂದ ಎಬ್ಬಿಸಿ, "ಇದೇನು ಕೆಲಸವಯ್ಯಾ" ಎಂದು ಕೇಳಿದನು.

ವೀಸೋಬಾ ಸೋಮಾರಿತನದಿಂದ "ಅಪ್ಪಾ, ಏನೋ ನಿದ್ದೆಯಲ್ಲಿ ನನ್ನ ಕಾಲು ಅತ್ತಕಡೆ ಹೋಗಿರಬಹುದು. ಮುದುಕ ನಾನು. ಕಾಲು ತೆಗೆದು ಮತ್ತೊಂದು ಕಡೆ ಇಡುವಷ್ಟು ಶಕ್ತಿಯೂ ಇಲ್ಲ. ತಪ್ಪಾಗಿ ತಿಳಿದುಕೊಳ್ಳದೆ ನೀನೇ ನನ್ನ ಕಾಲು ತೆಗೆದು ದೇವರಿಲ್ಲದ ಸ್ಥಳದಲ್ಲಿ ಇಟ್ಟುಬಿಡು" ಎಂದನು.

ಕೂಡಲೇ ನಾಮದೇವನು ವೀಸೋಬಾ ಕೇಶನ ಪಾದಗಳೆರಡನ್ನೂ ಹಿಡಿದುಕೊಂಡು ಲಿಂಗದ ಪಕ್ಕದಲ್ಲಿ ಇಡಹೋದನು. ಆದರೆ ಯಾವಾಗ ಬಂತೋ, ಎಲ್ಲಿಂದ ಬಂತೋ ಅಲ್ಲೊಂದು ಲಿಂಗ ಕಾಣಿಸಿತು. ಆಶ್ಚರ್ಯ ದಿಂದ ಆತನು ವೀಸೋಬನ ಕಾಲುಗಳನ್ನು ಬೇರೊಂದೆಡೆ ಇಡಲು ಹೋದನು. ಆದರೆ ಅಲ್ಲೂ ಸಹ ಒಂದು ಲಿಂಗ ಕಾಣಿಸಿತು. ಆಗ ನಾಮದೇವನು ವೀಸೋಬಾನನ್ನು ಸ್ವಲ್ಪ ಮುಂದಕ್ಕೆ ಜರುಗಿಸಿ ಕಾಲು ಅಲ್ಲಿಡಲು ಹೋದನು. ಅಲ್ಲೂ ಒಂದು ಲಿಂಗ ಸಿದ್ಧ ವಾಯಿತು. ಇದು ಸರಿಯಲ್ಲವೆಂದು ಆತನು

ವೃದ್ಧನನ್ನು ಭುಜದಮೇಲೆತ್ತಿಕೊಂಡು ಗರ್ಭ ಗುಡಿಯಿಂದ ಹೊರಗೆ ಬಂದು, ಅಲ್ಲಿ ಕೂರಿ ಸೋಣವೆಂದು ಪ್ರಯತ್ನಿಸಿದನು. ಅದೇನು ಸೋಜಿಗವೋ, ಹೊರಗೂ ಸಹ ಎಲ್ಲಿ ನೋಡಿದರೂ ಲಿಂಗಗಳೇ ಕಾಣಿಸಿದವು. ಏನೂ ದಿಕ್ಕುತೋರದೆ ಆ ವೃದ್ಧನ ಕಾಲು ಗಳೆರಡನ್ನೂ ತನ್ನ ನೆತ್ತಿಯ ಮೇಲಿಟ್ಟು ಕೊಂಡನು. ಯಾವಾಗ ಆ ಪಾದಗಳು ತನ್ನ ಶಿರವನ್ನು ತಾಕಿದವೋ ಆ ಕ್ಷಣವೇ ನಾಮ ದೇವನೂ ಒಂದು ಲಿಂಗವಾಗಿ ಬದಲಾಯಿಸಿದನು. ಆಗ ಆ ಲಿಂಗದಿಂದ 'ನಾನೂ ಸಹ ಲಿಂಗ ರೂಪವಾಗಿಬಿಟ್ಟೆನಲ್ಲಾ. ಎಲ್ಲಿ ನೋಡಿದರೂ ಲಿಂಗ ಮಯವಾಗಿದೆ' ಎಂಬ ಮಾತುಗಳು ಕೇಳಿಬಂದವು.

ಆವರೆವಿಗೂ ಕದಲಾಡದೆ ಮಿಸುಕಾಡದೆ ವೃದ್ಧನಂತೆ ನಟಿಸಿದ ವೀಸೋಬಾಕೇಶನು ತಟಕ್ಕನೆ ಎದ್ದು ಕುಳಿತು "ನಾಮದೇವ್, ಇದರಲ್ಲೇನೂ ವಿಚಿತ್ರವಿಲ್ಲ. ಭಗವಂತನಿಲ್ಲದ ಸ್ಥಳವಿಲ್ಲವೇ ಇಲ್ಲ. ಈ ವಿಷಯ ನಿನಗೆ ತಿಳಿಯ ಪಡಿಸುವ ಸಲುವಾಗಿಯೇ ಹೀಗೆ ಮಾಡಿದೆ. ಇಷ್ಟು ದಿನದಿಂದ ನೀನು ಈ ಪಂಡರೀಪುರದಲ್ಲಿ ಪಾಂಡುರಂಗನ ಆಕಾರದಲ್ಲಿ ಮಾತ್ರ ಭಗವಂತನಿದ್ದಾನೆಂದು ಭಾವಿಸಿದ್ದೆ. ಆತನು ಎಲ್ಲೆಲ್ಲಿಯೂ ಇದ್ದಾನೆ. ಮೊನ್ನೆ ಗೋರಾ ಮನೆಯಲ್ಲಿ ಆತನ ಮರದ ಚಕ್ಕೆಯಿಂದ ಏಟು ತಿಂದ ಭಕ್ತರೆಲ್ಲರಿಗೂ ಈ ವಿಷಯ ತಿಳಿದಿದೆ. ಆ ಮರದ ತುಂಡಿನಲ್ಲಿಯೂ ಸಹ ಅವರಿಗೆ ಭಗವಂತ ಕಾಣಿಸಿದ. ಆದ್ದರಿಂದಲೇ ಅವರು ಏಟಿಗೆ ಬೆದರಲಿಲ್ಲ. ನಿನಗೆ ಪರಿಪೂರ್ಣ ಜ್ಞಾನವಿಲ್ಲದಿದ್ದುದರಿಂದಲೇ ಭಯ ಪಟ್ಟು ಕೈ ಅಡ್ಡವಾಗಿಟ್ಟುಕೊಂಡೆ" ಎಂದನು.

ಅದಕ್ಕೆ ನಾಮದೇವನು "ಸತ್ಯಪ್ರಭೂ— ಗೋರಾ ನನ್ನನ್ನು 'ಅಪಕ್ವಘಟ' ಎಂದು ಅವಮಾನಮಾಡಿದನೆಂದು ಭಾವಿಸಿದ್ದೆ. ಆತನ ಮಾತು ಅಕ್ಷರಶಃ ನಿಜ. ಹೌದು, ನಾನು ಅಪಕ್ವಘಟವೇ" ಎಂದು ಒಪ್ಪಿಕೊಂಡನು.

ಆಗ ವೀಸೋಬನು "ನಾಮದೇವ್, ನಿನಗೆ ಪರಿಪೂರ್ಣವಾದ ಜ್ಞಾನ ಲಭಿಸಿತು. ಇನ್ನು ನೀನು ನನಗೆ ಸೇವೆಮಾಡಿ ತಿಳಿದುಕೊಳ್ಳಬೇಕಾದುದೇನಿಲ್ಲ" ಎಂದು ಆತನಿಗೆ ಮಾಮೂಲು ಸ್ವರೂಪವನ್ನುಕೊಟ್ಟು ಕಳುಹಿಸಿದನು.






## 9

[ಪ್ರಾಣವನ್ನು ಲೆಕ್ಕಿಸದೆ ಹೇಗೋ ಮಾಯಾ ಭವನವನ್ನು ಸೇರಿಕೊಂಡ ಸಂಧ್ಯಾ ನಿಶೀಥರು ಹೇಗೆ ಸಿಕ್ಕಿಕೊಂಡರು; ಆ ತರುವಾಯ ತಮ್ಮ ಯುಕ್ತಿಯಿಂದ ಹೇಗೆ ತಪ್ಪಿಸಿಕೊಂಡರು. ಕೊನೆಗೆ ಅವರ ಸುಳಿವನ್ನು ಉದಯನನು ಹೇಗೆ ತಿಳಿದುಕೊಂಡ ಎಂಬುದನ್ನು ಹಿಂದಿನ ಸಾರಿ ಓದಿರುವಿರಿ. ಆ ತರುವಾಯ—]

" ಎಲ್ಲಿದ್ದೀರೋ ನೀವು?" ಎಂಬ ಧ್ವನಿ ಕೇಳಿ ಬಂತೆಂದು ಹೇಳಿದ್ದೆವಷ್ಟೆ. ಹಾಗೆ ಕೂಗಿದ್ದು ಮತ್ತೆ ಯಾರೂ ಅಲ್ಲದೆ, ಸಂಧ್ಯಾ, ನಿಶೀಥರು ಯುಕ್ತಿಯಿಂದ ಗಡ್ಡದವನ ಹತ್ತಿರಕ್ಕೆ ಓಡಿಸಿದ್ದ ರಾಕ್ಷಸನೇ ಆಗಿದ್ದನು. ಗಡ್ಡದಾತನನ್ನು ಕಂಡ ಮೇಲೆ ನಿಜವಾದ ವಿಷಯ ಅವನಿಗೆ ತಿಳಿಯಿತು. "ಅಯ್ಯೋ, ಅವರನ್ನು ಅಲ್ಲೇ ಬಿಟ್ಟು ಬಂದೆಯಾ? ನನ್ನ ಹತ್ತಿರದಿಂದ ಭಸ್ಮ ಮತ್ತು ಚೌಕಗಳನ್ನು ಲಪಟಾಯಿಸಿದ್ದೇ ಅಲ್ಲದೆ, ನಿನಗೂ ಮೋಸ ಮಾಡಿ ಟೋಪಿ ಹಾಕಿದರು. ಇವರನ್ನು ನೋಡಿದರೆ ಅಸಾಮಾನ್ಯರಂತೆ ಕಾಣುವುದು. ಈಗಲಾದರೂ ಮಿಂಚಿ ಹೋದುದೇನಿಲ್ಲ. ನೀನು ತಕ್ಷಣ ಹಿಂತಿರುಗಿ ಅವರನ್ನು ಬಂಧಿಸು. ಇಲ್ಲವೇ ನಮ್ಮ ಭವನದ ರಹಸ್ಯ ಅವರಿಗೆ ತಿಳಿದುಬಿಡುತ್ತೆ. ಹಾಗೆ ಅವರಿಗೆ ತಿಳಿದುಬಿಟ್ಟತೋ, ನಿನಗೂ ನನಗೂ ಸಾವು ಖಂಡಿತವೆಂದೇ ಹೇಳಬೇಕು. ಆದ್ದರಿಂದ ಹೋಗು, ಬೇಗ ಹೋಗು" ಎಂದ ಗಡ್ಡದಾತನು ರಾಕ್ಷಸನನ್ನು ಅವಸರ ಪಡಿಸಿ ಕಳಿಸಿದನು.

ಗಡ್ಡದಾತನ ಸಲಹೆಯಂತೆ ರಾಕ್ಷಸನು ಭವನಕ್ಕೆ ಹಿಂತಿರುಗುವ ವೇಳೆಗೆ ತಾನು ಕಾವಲು ಇರಿಸಿ ಹೋಗಿದ್ದ ದ್ವಾರದ ಹತ್ತಿರ ಸಂಧ್ಯಾ ನಿಶೀಥರು ಕಾಣಿಸಲಿಲ್ಲ. ಅವನು



ಕೋಪದಿಂದ ಕೆಂಡ ಕಾರುತ್ತಾ "ಎಲ್ಲೋ ನೀವು?" ಎಂದು ಕೂಗಾಡುತ್ತಾ ಕೊಳದ ಹತ್ತಿರ ಬಂದನು. ಕೊಳದ ಹತ್ತಿರದಲ್ಲೂ ಅವರ ಸುಳಿವು ಕಾಣಿಸಲಿಲ್ಲ. ಆದ್ದರಿಂದ ಅವನು ಅದೇ ಕೆಲಸವಾಗಿ ಇರುವೆ ತಲೆಯಷ್ಟು ಜಾಗವನ್ನೂ ಬಿಡದೆ ಆ ಸುತ್ತು ಮುತ್ತಲೂ ಹುಡಿಕಿದನು. ಸಾಯಂಕಾಲದ ವರೆವಿಗೆ ಹುಡಿಕಿದರೂ ಪ್ರಯೋಜನವಾಗಲಿಲ್ಲ. ಅವನಿಗೇ ಬೇಸರವಾಯಿತು. ನಿರಾಶೆಯಿಂದ ಭವನಕ್ಕೆ ಹಿಂತಿರುಗಿದನು.

ರಾಕ್ಷಸನು ಈ ರೀತಿ ಹುಡುಕುತ್ತಿರುವಷ್ಟು ಸಮಯವೂ ಉದಯನನು ತನ್ನ ಸಹೋದರರೊಂದಿಗೆ, ಮಿಕ್ಕ ಹಂಸಗಳ ಕೂಡ ಕೊಳದಲ್ಲೇ ಇದ್ದನು. ರಾಕ್ಷಸನು ಮತ್ತೆ ಭವನದೊಳಗೆ ಹೊರಟು ಹೋದ ಕೂಡಲೇ ಉದಯನನು ಕೊಳದಿಂದ ಹೊರಗೆ ಬಂದು ಯಥಾ ರೂಪ ಪಡೆದನು. ಆತನ ಹಿಂದೆಯೇ ಸರೋವರ ಕನ್ಯೆ ಸಹ ಹೊರಗೆ ಬಂದು ಸೇರಿಕೊಂಡಳು.

ಆಗ ಆ ಕನ್ಯೆ ಉದಯನನೊಂದಿಗೆ "ನೀವು ಯಾರೋ ನತದೃಷ್ಟರು. ದಾರಿ ತಪ್ಪಿ ಈ ಭವನದ ಸುತ್ತಮುತ್ತಲು ನಾಲ್ಕು ಹರಿದಾರಿ ದೂರದಲ್ಲಿ ಎಲ್ಲಿ ಯಾವ ಹುಳ ಕದಲಾಡಿದರೂ ತಟಕ್ಕನೆ ಕಂಡು ಹಿಡಿದು ಕಟ್ಟಿ ಹಾಕಬಲ್ಲ ಗಡ್ಡದವನೊಬ್ಬನಿದ್ದಾನೆ. ಅವನನ್ನು ತಪ್ಪಿಸಿ ಬರಲು ಬ್ರಹ್ಮನಿಂದಲೂ ಸಾಧ್ಯವಿಲ್ಲ. ಮತ್ತೆ ನೀವು ಹೇಗೆ ಬಂದಿರೋ ಬಹಳ ಆಶ್ಚರ್ಯವಾಗಿಯೇ ಇದೆ. ಈಗಲಾದರೂ ನೀವು ಈ ಸ್ಥಳಬಿಟ್ಟು ಹೊರಟುಹೋಗುವುದು ಉತ್ತಮ. ಇಲ್ಲದಿದ್ದಲ್ಲಿ ನಿಮ್ಮ ಪ್ರಾಣಕ್ಕೆ ಸಂಚಕಾರವುಂಟಾಗುವುದರಲ್ಲಿ ಸಂಶಯವಿಲ್ಲ. ಒಬ್ಬ ದುಷ್ಟ ರಾಕ್ಷಸನದು ಈ ಭವನ. ಅವನು ಈಗ ಇಲ್ಲಿ ಇಲ್ಲ. ಅವನು ಯಾವಾಗ ಬರುವನೋ, ಯಾವಾಗ ಹೋಗುವನೋ ಯಾರಿಗೂ ತಿಳಿಯದು. ಇಷ್ಟರಲ್ಲಿ ನಿಮ್ಮ ಸಹೋದರರಿಗೆ ಮೊದಲಿನ ರೂಪಗಳು ಬರುವ ಮಾರ್ಗ ನಾನು ಹೇಳುತ್ತೇನೆ. ಆ ರೀತಿ ಮಾಡಿ, ಬೇಗ ಇಲ್ಲಿಂದ ತಪ್ಪಿಸಿಕೊಂಡು ಹೋಗಿ" ಎಂದು ಹೇಳಿದಳು.

ಎಲ್ಲವನ್ನೂ ಕೇಳಿ ಉದಯನನು "ನಾವು ದಾರಿ ತಪ್ಪಿ ಇಲ್ಲಿಗೆ ಬಂದಿಲ್ಲ. ಈ ಭವನದ ರಹಸ್ಯವನ್ನು ತಿಳಿಯುವ ಕುತೂಹಲದಿಂದಲೇ ಪ್ರಾಣಗಳನ್ನೂ ಸಹ ಲೆಕ್ಕ ಮಾಡದೆ ಬಂ

ದಿದ್ದೇವೆ. ಆದುದರಿಂದ ನಮ್ಮನ್ನು ಕುರಿತು ನೀನು ಚಿಂತಿಸಬೇಡ. ಆ ರಾಕ್ಷಸನ ವಿಷಯ ಕುರಿತು ನಿನಗೆ ತಿಳಿದ ವಿವರಗಳನ್ನು ಹೇಳಿದರೆ ಸಾಕು. ನೀನು ಯಾರೋ ಇದುವರೆವಿಗೂ ಹೇಳಲೇ ಇಲ್ಲವಲ್ಲಾ? ಹೇಳಲು ಅಭ್ಯಂತರ ವಿಲ್ಲದಿದ್ದರೆ ಆ ಸಂಗತಿ ಕೇಳಿ ಸಂತೋಷ ಪಡುವೆನು" ಎಂದನು.

ಅದಕ್ಕೆ ಸರೋವರಕನ್ಯೆಯು "ಹೇಳಲು ಏನೂ ಸಂಕೋಚವಿಲ್ಲ. ಆದರೆ ತಿಳಿದು ಕೊಂಡು ನೀನು ಏನು ಮಾಡಲೂ ಸಾಧ್ಯವಿಲ್ಲ ವೆಂದು ಭಾವಿಸುತ್ತೇನೆ. ಆದರೂ ನೀನು ಕೇಳಿ ದುದರಿಂದ ಹೇಳುತ್ತೇನೆ." ಎಂದು ಕೊಳದ ಹತ್ತಿರ ಹೋಗಿ ಕೊಂಚ ಹೊತ್ತಿಗೆಲ್ಲಾ ಮತ್ತೆರಡು ಹಂಸಗಳೊಂದಿಗೆ ಹೊರಗೆ ಬಂದಳು. ಸರೋವರ ಕನ್ಯೆಯೊಂದಿಗೆ ಆ ಎರಡು ಹಂಸಗಳೂ ಸಹ ದಡಕ್ಕೆ ಬಂದ ಕೂಡಲೇ ಅವು ಇಬ್ಬರೂ ಸುಂದರ ಕನ್ಯೆಯ ರಾಗಿ ರೂಪಾಂತರ ಹೊಂದಿದರು.

ಆ ಮೂವರೂ ಒಂದೇ ಅಚ್ಚಿನಲ್ಲಿ ಎರಕ ಹೊಯಿದಂತಿರುವುದನ್ನು ಕಂಡು ಉದಯ ನನು "ನೀವು ಅವಳಿ ಮಕ್ಕಳಂತೆ ಕಾಣಿಸು ತ್ತಿರುವಿರಲ್ಲಾ?" ಎಂದನು. "ಹೌದು" ಎಂದು ಅವರ ಬಾಯಿಯಿಂದ ಉತ್ತರ ಬಂತೋ ಇಲ್ಲವೋ ಉದಯನನ ಉತ್ಸಾಹಕ್ಕೆ ಮೇರೆ ಯೇ ಇಲ್ಲ. ಆನಂದ ಭರಿತನಾಗಿ "ಹಾಗಾದರೆ ಇಷ್ಟು ದಿನಗಳಿಂದ ನಾವು ಹುಡುಕುತ್ತಿದ್ದುದು ನಿಮ್ಮನ್ನೇ! ನೀವು ದಾನಶೀಲ ಮಹಾರಾಜರ ಕುವರಿಯರಲ್ಲವೇ" ಎಂದು ಕೇಳಿದನು.



ಈ ಪ್ರಶ್ನೆಯನ್ನು ಕೇಳಿ ಆ ಕನ್ಯೆಯರು ತುಂಬಾ ಅಚ್ಚರಿಗೊಂಡು "ಹೌದು, ನಮ್ಮ ವಿಷಯ ನಿಮಗೆ ತಿಳಿದುದಾದರೂ ಹೇಗೆ?" ಎಂದು ವಿಸ್ಮಯದಿಂದ ಕೇಳಿದರು. "ಹೇಗೇ ನುಬಂತು? ನಿಮ್ಮ ವಿಷಯವೆಲ್ಲಾ ನಮಗೆ ಮೊದಲೇ ಗೊತ್ತಾಗಿದೆ. ನಾವು ನಿಮ್ಮನ್ನು ಕಂಡು ಹಿಡಿಯುವ ಸಲುವಾಗಿ ನಿಮ್ಮ ತಂದೆ ಯವರ ಆಶೀರ್ವಾದಗಳನ್ನು ಪಡೆದು ಹೊರಟಿರುವೆವು. ನಿಮ್ಮ ಹೆಸರು?" ಎಂದು ಕೇಳಿದ ಉದಯನ.

"ಸುಹಾಸಿನಿ....ನಮ್ಮ ಪೂರ್ವೋತ್ತರ ಗಳೆಲ್ಲಾ ತಿಳಿದಿದೆ ಎಂದಿರಿ. ಹಾಗಾದರೆ ಮಿಕ್ಕಿಬ್ಬರ ಹೆಸರುಗಳನ್ನು ನೀವೇ ಹೇಳಬಲ್ಲಿ ರೆಂದು ಭಾವಿಸುವೆನು" ಎಂದಳು ಆ ಕನ್ಯೆ.



ದೊಯ್ದಳು. ಆ ಮರದ ಪಕ್ಕದಲ್ಲೇ ಕೆಲವು ನಾಯಿ ಕೊಡೆಗಳು ಬೆಳೆದಿದ್ದವು. ಅವುಗಳಲ್ಲಿ ಕೆಲವನ್ನು ಕಿತ್ತುಕೊಳ್ಳುವಂತೆ ಹೇಳಿದಳು. ಉದಯನ ಹಾಗೇ ಮಾಡಿದನು. ತರುವಾಯ ಇನ್ನಷ್ಟುದೂರ ಕರೆದುಕೊಂಡು ಹೋದಳು. ಅಲ್ಲಿ ಒಂದು ರಾಕ್ಷಸನ ವಿಗ್ರಹವಿತ್ತು. ಆ ವಿಗ್ರಹದ ಬಾಯಿಯಿಂದ ನೀರು ಸುರಿಯುತಿತ್ತು. ಆ ನೀರನ್ನು ಸ್ವಲ್ಪ ತೆಗೆದುಕೋ ಎಂದಳು. ಒಂದು ಎಲೆಯನ್ನು ದೊನ್ನೆಯಂತೆ ಮಾಡಿಕೊಡಲು, ಉದಯನನು ಅದರಲ್ಲಿ ನೀರು ತುಂಬಿಕೊಂಡನು. ಇವುಗಳೊಂದಿಗೆ ಅವರು ಮತ್ತೆ ಕೊಳದ ಹತ್ತಿರಕ್ಕೆ ಬಂದರು.

"ಹೇಳಬೇಕೇನು? ಇಷ್ಟು ಸುಲಭವಾಗಿ ಇಷ್ಟು ಬೇಗ ನಿಮ್ಮನ್ನು ಸಂಧಿಸುವೆವೆಂದು ನಾವು ಕನಸಿನಲ್ಲಿಯೂ ಎಣಿಸಿರಲಿಲ್ಲ. ಈ ಶುಭವಾರ್ತೆ ನನ್ನ ಸಹೋದರರಿಗೂ ತಿಳಿದರೆ ಎಷ್ಟು ಚೆನ್ನಾಗಿರುವುದು?" ಎಂದು ತನ್ನ ಸಹೋದರರು ಮಾನವ ರೂಪದಲ್ಲಿಲ್ಲದೇ ಇರುವುದಕ್ಕೆ ಸಂತಾಪ ವ್ಯಕ್ತಪಡಿಸಿದನು.

ಇದನ್ನು ಕಂಡು ಸುಹಾಸಿನಿ "ಚಿಂತೆ ಪಡಬೇಡಿ" ಎಂದು ಕೊಳದಲ್ಲಿ ಇಳಿದು ಮತ್ತೆ ಸ್ವಲ್ಪ ಸಮಯಕ್ಕೆ ಕಪಿಯ ರೂಪದಲ್ಲಿದ್ದ ನಿಶೀಥ ಮತ್ತು ಶಿಲಾಪ್ರತಿಮೆಯ ರೂಪದಲ್ಲಿದ್ದ ಸಂಧ್ಯಾ ಕುಮಾರರೊಂದಿಗೆ ಹೊರಗೆ ಬಂದಳು. ತರುವಾಯ ಉದಯನನನ್ನು ಸಂಗಡ ಕರೆದುಕೊಂಡು ಆ ತೋಟದಲ್ಲಿದ್ದ ಒಂದು ಮಾವಿನ ಮರದ ಹತ್ತಿರಕ್ಕೆ ಕರೆ

ಆಗ ಸುಹಾಸಿನಿ ಆ ನಾಯಿ ಕೊಡೆಗಳನ್ನು ಕೋತಿಗಿಡುವಂತೆ ಹೇಳಿದಳು. ಹಾಗೇ ಮಾಡಲು, ಕಪಿಯ ರೂಪಹೋಗಿ ನಿಶೀಥನಿಗೆ ಮತ್ತೆ ಮೊದಲಿನ ರೂಪವೇ ಬಂದುಬಿಟ್ಟಿತು. ತರುವಾಯ ದೊನ್ನೆಯಲ್ಲಿ ತಂದಿದ್ದ ನೀರನ್ನು ಶಿಲಾಪ್ರತಿಮೆಯ ಮೇಲೆ ಹಾಕಲು ಸಂಧ್ಯಾ ಕುಮಾರನಿಗೆ ಮೊದಲಿನ ರೂಪವೇ ಬಂದುಬಿಟ್ಟಿತು.

ಆಗ ಉದಯನನು ಆ ಕನ್ಯೆಯರನ್ನು ತನ್ನ ಸಹೋದರರಿಗೆ ಪರಿಚಯ ಮಾಡಿಸುತ್ತಾ "ನೋಡಿದಿರಾ, ಈ ವಿಚಿತ್ರ. ನಾವು ಯಾರಿಗಾಗಿ ಹುಡುಕುತ್ತಿರುವೆವೋ ಆ ರಾಜಕುಮಾರಿಯರೇ ಇವರು. ಆದ್ದರಿಂದ ನಾವು ಬಂದಕಾರ್ಯ ಜಯವಾದಂತೆಯೇ ಸರಿ. ಇನ್ನು ಇವರನ್ನು ಕರೆದುಕೊಂಡು ನಾವು ಈ

ಮಾಯಾ ಭವನದಿಂದ ಹೊರಬೀಳುವ ಮಾರ್ಗ ಹುಡುಕಬೇಕು" ಎಂದನು.

ಅದಕ್ಕೆ ಸುಹಾಸಿನಿ "ಅದು ಅಷ್ಟು ಸುಲಭವಾದ ಕಾರ್ಯವಲ್ಲ. ನಮನ್ನು ರಕ್ಷಿಸುವ ಮಾತು ಒತ್ತೊಟ್ಟಿಗಿರಿಸಿ, ಮೊದಲು ನಿಮ್ಮ ಪ್ರಾಣಗಳನ್ನು ಕಾಪಾಡಿಕೊಳ್ಳಲು ಇಲ್ಲಿಂದ ಹೊರಬಿದ್ದರೆ...." ಎಂದು ಇನ್ನೂ ಏನೋ ಹೇಳುತ್ತಿರುವಲ್ಲೆ ಒಂದು ದೊಡ್ಡ ಸುಂಟರು ಗಾಳಿ ಪ್ರಾರಂಭವಾಯಿತು. ಆಗ ಭಯಪಟ್ಟು "ಅದೋ, ಅವನು ಬರುತ್ತಿದ್ದಾನೆ. ಈ ಸುಳಿ ಗಾಳಿಯೇ ಅದರ ಗುರುತು. ಇನ್ನು ನಾವು ಮತ್ತೆ ಕೊಳದಲ್ಲಿ ಇಳಿಯುವೆವು. ಮತ್ತೆ ನಿಮ್ಮ ಗತಿ ಏನು? ಹಿಂದಿನಂತೆ ನಿಮ್ಮನ್ನು ಹಂಸಗಳಾಗಿ ಬದಲಾಯಿಸಿದರೂ ಅವನು ನಿಮ್ಮನ್ನು ಕಂಡು ಹಿಡಿದುಬಿಡುತ್ತಾನೆ. ಮತ್ತೆ ಹೇಗೆ ತಪ್ಪಿಸಿಕೊಳ್ಳುವಿರೋ ಏನೋ, ಎಚ್ಚರಿಕೆ." ಎಂದು ಹೇಳುತ್ತಾ ಸುಹಾಸಿನಿ ತನ್ನ ತಂಗಿಯರೊಂದಿಗೆ ಕೊಳದೊಳಕ್ಕೆ ಇಳಿದು ಬಿಟ್ಟಳು.

ಕೂಡಲೇ ಉದಯನನು ತನ್ನ ಹತ್ತಿರವಿದ್ದ ಬಿಳಿ ಭಸ್ಮವನ್ನು ತನ್ನ ಮೇಲೆ ಮತ್ತು ಸಹೋದರರ ಮೇಲೆ ಎರಚಿದನು. ತಕ್ಷಣ ಅವರು ಅದೃಶ್ಯರಾದರು. ಮತ್ತೆ ಸ್ವಲ್ಪ ಸಮಯಕ್ಕೆಲ್ಲಾ ಸುಳಿಗಾಳಿ ಕಡಿಮೆ ಆಯಿತು. ಕೂಡಲೇ ಒಂದು ಬ್ರಹ್ಮಾಂಡವಾದ ಹದ್ದು ಕೊಳದ ದಡಕ್ಕೆ ಬಂದು ವಾಲಿದಕೂಡಲೇ





ಹತ್ತಿರವಿದ್ದ ಚೌಕದ ಸಹಾಯದಿಂದ ಹಣ್ಣು ಹಂಪಲುಗಳನ್ನು ಸೃಷ್ಟಿಸಿಕೊಂಡು, ಹೊಟ್ಟೆ ತುಂಬಾ ತಿಂದರು. ತರುವಾಯ ಅವಳಿ ಕನ್ಯೆಯರು ಮತ್ತೆ ಹೊರಗೆ ಬರುವರೇನೋ ಎಂದು ತುಸ ಸಮಯ ಕಾದು ನೋಡಿದರು. ಅವರೆಷ್ಟು ಹೊತ್ತಾದರೂ ಬರಲೇ ಇಲ್ಲ. ಆ ರಾತ್ರಿ ಅಲ್ಲಿಯೇ ಯಾವುದೋ ಒಂದು ರೀತಿ ಕಳೆಯಬೇಕೆಂದು ನಿರ್ಧರಿಸಿದರು. ಮಾಮೂಲು ರೂಪದಲ್ಲಿರುವುದು ಕ್ಷೇಮಕರವಲ್ಲವೆಂದು ಅವರು ಭಸ್ಮದ ಮಹಿಮೆಯಿಂದ ಮತ್ತೆ ಅದೃಶ್ಯ ಹೊಂದಿ, ಅಲ್ಲಿಯೇ ಇದ್ದುಬಿಟ್ಟರು.

ಬೆಳಗಾಯಿತು. ಕೊಳದಿಂದ ಅವಳಿ ಕನ್ಯೆಯರು ಹೊರಗೆ ಬರುವುದೂ, ಈ ಅವಳಿ ಸಹೋದರರು ಮತ್ತೆ ಮಾಮೂಲು ರೂಪ ಪಡೆಯುವುದೂ ಒಂದೇ ಸಾರಿ ಸಂಭವಿಸಿತು.

ಆಗ ಉದಯನನು ಸುಹಾಸಿನಿಯನ್ನು ಕೇಳಿದನು "ಹಾಗಾದರೆ ಈ ರಾಕ್ಷಸ ಎಲ್ಲಿಗೆ ಹೊರಟ? ಯಾವಾಗ ಬರುತ್ತಾನೆ?"

"ಎಲ್ಲಿಗೇನು? ಬೇಟೆಗೆ ಹೋಗಿದ್ದಾನೆ. ಬೇಟೆ ಎಂದರೆ ಪ್ರಾಣಿಗಳ ಬೇಟೆಯಲ್ಲ. 'ಅವಳಿಗಳ ಬೇಟೆ" ಎಂದು ಉತ್ತರವಿತ್ತಳು ಸುಹಾಸಿನಿ.

"ಅವಳಿಗಳ ಬೇಟೆ?" ಎಂದು ಆಶ್ಚರ್ಯಚಕಿತನಾಗಿ ಉದ್ಗರಿಸಿದ ಉದಯನ.

"ಅದೊಂದು ವಿಚಿತ್ರವಾದ ರಹಸ್ಯ. ಈ ರಕ್ಕಸ ಒಂದು ದೇವಿಯನ್ನು ಆರಾಧಿಸು

ಅದಕ್ಕೆ ಹದ್ದಿನ ರೂಪ ಹೋಗಿ ಒಬ್ಬ ಭಯಂಕರವಾದ ರಾಕ್ಷಸ ಆಕಾರಪಡೆಯಿತು.

ಆ ರಾಕ್ಷಸನು ಹಾಗೆ ನಿಂತಕೂಡಲೇ ಕೊಳದಲ್ಲಿದ್ದ ಹಂಸಗಳು ರೆಕ್ಕೆಗಳನ್ನು ರಪರಪನೆ ಬಡಿಯುತ್ತಾ ಸಾಲಾಗಿ ದಡದ ಹತ್ತಿರ ನೀರಿನಲ್ಲಿ ನಿಂತವು. ರಾಕ್ಷಸನು ಒಂದು ಕ್ಷಣ ಅವುಗಳ ಕಡೆ ಪರೀಕ್ಷಿಸಿ ನೋಡಿ, ತಕ್ಷಣ ಹದ್ದಿನ ರೂಪ ಹೊಂದಿ, ಭರ್ರನೆ ಹಾರಿ ಆಕಾಶಮಾರ್ಗದಲ್ಲಿ ಹೊರಟುಹೋದನು.

ಇದೆಲ್ಲಾ ನಡೆಯುವವೇಳೆಗೆ ತುಂಬಾ ಕತ್ತಲಾಯಿತು. ಉದಯನನು ತನ್ನ ಭಸ್ಮದ ಸಹಾಯದಿಂದ ತನಗೂ, ತನ್ನ ಸಹೋದರರಿಗೂ ಮಾಮೂಲು ರೂಪ ತರಿಸಿಕೊಂಡನು. ಅಂದಿಗೆ ಅವರು ಊಟ ಮಾಡಿ ಮೂರು ದಿನಗಳಾಗಿತ್ತು. ಆದ್ದರಿಂದ ಮೊದಲು ತಮ್ಮ



ತ್ತಿದ್ದಾನೆ. ಆ ದೇವಿಯ ಮಹಿಮೆಯಿಂದಲೇ ಈ ಮಾಯಾ ಭವನವನ್ನು ನಿರ್ಮಿಸಿದ್ದಾನೆ. ಇದಕ್ಕೆ ಪ್ರತಿಯಾಗಿ ಅವನು ಆ ದೇವಿಗೆ ಐವತ್ತು ಅವಳಿಗಳನ್ನು ಬಲಿಕೊಡಬೇಕು. ಈ ಬಲಿ ಪೂರ್ತಿ ಆಯಿತೆಂದರೆ ಆ ದೇವಿ ಅವನಿಗೆ ಎಲ್ಲಾ ಮಹಿಮೆಗಳನ್ನು ಪ್ರಸಾದಿಸುವುದು ಮಾತ್ರವೇ ಅಲ್ಲದೆ, ಚಿರಕಾಲ ಬಾಳುವಂತೆ ವರವನ್ನೂ ಸಹ ಕೊಡುವಳು. ಈಗ ನಲವತ್ತೇಳು ಅವಳಿಗಳು ಮಾತ್ರ ಸಿಕ್ಕಿದ್ದಾರೆ! ಉಳಿದವರು ಯಾವಾಗ ದೊರಕುವರೋ, ಯಾವಾಗ ಅವರೆಲ್ಲರನ್ನೂ ಬಲಿಕೊಟ್ಟು ದೇವಿಯ ಕೃಪೆಯನ್ನು ಹೊಂದುವೆನೋ ಎಂದು ಅವನು ಒಂದು ಕ್ಷಣವಾದರೂ ನೆಮ್ಮದಿಯಿಲ್ಲದೆ ಹೀಗೆ ಪ್ರತಿ ನಿತ್ಯ ಹದ್ದಿನ ರೂಪದಲ್ಲಿ ಪ್ರಪಂಚವನ್ನೆಲ್ಲಾ ಸುತ್ತಿ ಬರುತ್ತಿರುತ್ತಾನೆ." ಎಂದು ರಾಕ್ಷಸನ ರಹಸ್ಯ ಜೀವನವನ್ನು ಕುರಿತು ಹೇಳಿದಳು.

ಇದೆಲ್ಲವನ್ನೂ ನಮ್ಮ ಅವಳಿ ಮಕ್ಕಳು ಬಹು ಶ್ರದ್ಧೆಯಿಂದ ಕಿವಿಗೊಟ್ಟು ಕೇಳಿದರು. ತರುವಾಯ "ಎಷ್ಟು ಅದೃಷ್ಟವಂತರು ನಾವು. ನಾವು ಮೂವರೂ ಅವನಿಗೆ ಸಿಕ್ಕಿಬಿಟ್ಟಿದ್ದರೆ, ಇಂದೇ ಅವನ ಪೂಜೆ ಪೂರ್ತಿ ಆಗಿಬಿಡುತ್ತಿತ್ತು. ಬಲಿ ಸಂಪೂರ್ಣವಾಗುತಿತ್ತು." ಎಂದನು ಉದಯನ.

"ಅದು ಹೇಗೆ? ನೀವೂ, ಅವಳಿಗಳೇನು?" ಎಂದು ಕೇಳಿದರು ಕನ್ಯೆಯರು.

"ಹೌದು. ಅವನಿಗೆ ಬೇಕಾಗಿದ್ದ ಮನುಷ್ಯರೂ, ನಿಮ್ಮನ್ನು ರಕ್ಷಿಸಬೇಕಾದವರೂ ನಾವೇ ಆದೆವೆಲ್ಲಾ ಎಂದು ವಿಚಾರಪಡುತ್ತಿದ್ದೇನೆ." ಎಂದ ಉದಯನ.

"ಹಾಗಾದರೆ ನೀವು ಬಹಳ ಜಾಗ್ರತೆಯಿಂದ ನಡೆದುಕೊಳ್ಳಬೇಕು" ಎಂದು ಎಚ್ಚರಿಸಿದಳು ಸುಹಾಸಿನಿ.

"ಹೌದು. ನಿಜವಾದ ಸಂಗತಿ ಈಗ ತಿಳಿಯಿತಾದ್ದರಿಂದ ಇನ್ನುಮುಂದೆ ಜಾಗರೂಕತೆಯಿಂದಲೇ ಇರುತ್ತೇವೆ. ಆದರೆ ಇಲ್ಲಿಂದ ಹೊರಬೀಳುವ ಮಾರ್ಗವನ್ನು ಆಲೋಚಿಸಬೇಕಷ್ಟೆ. ಈ ಸ್ಥಳವೆಲ್ಲಾ ಮಾಯಾಜಾಲದಿಂದ ತುಂಬಿರುವಂತೆ ತೋರುತ್ತಲಿದೆ. ಆದ್ದರಿಂದ ಇಲ್ಲಿಂದ ಹೊರ

ಬೀಳುವಾಗ ನಾವು ಎದುರಿಸಬೇಕಾದ ಕಷ್ಟಗಳನ್ನು ತಿಳಿಸಿದರೆ ತಕ್ಕ ಉಪಾಯಗಳನ್ನು ಆಲೋಚಿಸುವೆವು." ಎಂದ ಉದಯನ.

ಅದಕ್ಕೆ ಸುಹಾಸಿನಿ "ಎಲ್ಲಕ್ಕಿಂತಲೂ ಮುಖ್ಯವಾದ ವಿಷಯ ಒಂದಿದೆ. ಅದೇನೆಂದರೆ ನೀವು ಆ ರಾಕ್ಷಸನ ಕಣ್ಣಿಗೆ ಬೀಳದೆ ಅವನ ಭೂಗೃಹದಲ್ಲಿ ಪ್ರವೇಶ ಮಾಡಿದರೆ ಸರಿಹೋಗುವುದು" ಎಂದಳು.

ಇದನ್ನು ಕೇಳಿ ಉದಯನನು "ಓ, ಅದೆಷ್ಟರ ಕೆಲಸ. ನಮ್ಮ ಹತ್ತಿರವಿರುವ ಭಸ್ಮದ ಸಹಾಯದಿಂದ ನಾವು ಯಾವರೀತಿ ಅದೃಶ್ಯ ರೂಪವನ್ನು ಪಡೆಯುತ್ತಿರುವೆವೋ ನೀವೇ ನೋಡಿರುವಿರಿ." ಎಂದನು.

ಅದಕ್ಕೆ ಸುಹಾಸಿನಿ "ಭಲೇ ಉಪಾಯ ಕಂಡು ಹಿಡಿದಿರಲ್ಲ! ಸಧ್ಯ ಮೊದಲೇಹೇಳಿದ್ದು ಎಷ್ಟೋ ಉಪಕಾರವಾಯಿತು. ನಿಮ್ಮ ಭಸ್ಮಗಳೂ, ಅಂಜನಗಳೂ ಅವನ ಭೂಗೃಹದಲ್ಲಿ ಕೆಲಸ ಮಾಡಲಾರದು. ಇಲ್ಲಿರುವವರೆವಿಗೇ ಅವುಗಳ ಮಹಿಮೆ, ಆದುದರಿಂದ ಅದರ ಆಶೆಯಿಟ್ಟುಕೊಳ್ಳಬೇಡಿ" ಎಂದು ಹೇಳಿದಳು.

ಈ ವಿಷಯವನ್ನು ಅರಿತ ಕೂಡಲೇ ನಮ್ಮ ಅವಳಿ ಕುಮಾರರಲ್ಲಿ ಅಷ್ಟರವರೆವಿಗಿದ್ದ ಧೈರ್ಯ ಉಡುಗಿ, ಪೆಚ್ಚುಮುಖ ಹಾಕಿದರು. ಅವರ ಸ್ಥಿತಿಕಂಡ ಸುಹಾಸಿನಿ "ಹಾಗೆ ಅಧೈರ್ಯ ಪಡುವಿರೇಕೆ? ಬುದ್ಧಿ ಉಪಯೋಗಿಸಿ ಯಾವುದಾದರೂ ಒಂದು ಉಪಾಯ ಯೋಚಿಸಿ" ಎಂದಳು.

"ಆಲೋಚಿಸಲಾದರೂ ಸಮಯವಿರಬೇಕಲ್ಲವೇ?" ಎಂದ ಉದಯನ.

ಅದಕ್ಕೆ ಸುಹಾಸಿನಿ "ನಿಜ. ನಿದಾನವಾಗಿಯೇ ಆಲೋಚಿಸಬೇಕಾಗುತ್ತದೆ" ಎಂದಳು.

[ಅವಳಿ ಕುಮಾರರು ಯಾವುದಾದರೂ ಉಪಾಯ ಕಂಡು ಹಿಡಿದರೇ? ರಾಕ್ಷಸನ ಕೈಯಲ್ಲಿ ಸಿಲುಕದೆ ತಪ್ಪಿಸಿಕೊಂಡರೇ? ಮುಂದಿನ ಸಂಚಿಕೆಯಲ್ಲಿ ಓದಿ]






ಅನಂತಪುರದ ಜಿಲ್ಲೆಯಲ್ಲಿ ಬುಕ್ಕರಾಯ ಸಮುದ್ರವೆಂಬ ಒಂದು ಗ್ರಾಮವಿತ್ತು.

ಆ ಗ್ರಾಮಕ್ಕೆ ಸೇರಿದಂತೆ ಒಂದು ದೊಡ್ಡ ಕೆರೆಯಿತ್ತು. ಆ ವರ್ಷ ಮಳೆಗಾಲದಲ್ಲಿ ಅತಿ ವೃಷ್ಟಿಯಾಯಿತು. ಎಡೆಬಿಡದೆ ಅಹೋರಾತ್ರಿ ಹಾಗೆ ಸುರಿಯುತ್ತಿದ್ದ ಮಳೆಗೆ ಜನರೆಲ್ಲ ಬೆದರಿ "ಪ್ರಳಯಕಾಲ ಈಗಲೇ ಬಂದು ಬಿಟ್ಟಿತೋ?" ಎಂದು ಜೀವ ಕೈಯಲ್ಲಿ ಹಿಡಿದು ಕೊಂಡು ಕಾಲ ಕಳೆಯುತ್ತಿದ್ದರು.

ಆ ಮಳೆಗೆ ಗ್ರಾಮದ ಕೆರೆ ತುಂಬಿ ನೀರು ಕಟ್ಟೆ ಅಂಚಿನವರೆಗೆ ತುಳುಕಾಡುತಲಿತ್ತು. ಈ ಸ್ಥಿತಿಯನ್ನು ಕಂಡು ಗ್ರಾಮಸ್ಥರು "ಅಯ್ಯೋ, ದೇವರೇ, ಇಷ್ಟರವರೆವಿಗೂ ನೀರು ಬಂದ ಮೇಲೆ ಕಟ್ಟೆ ಒಡೆಯದೆ ಇರುತ್ತದೆಯೇ? ಏರಿ ಒಡೆದು ಬಿಟ್ಟಿತೆಂದರೆ ಇನ್ನೇನಿದೆ? ಈ ಗ್ರಾಮವೇ ಅಲ್ಲ, ಸುತ್ತಮುತ್ತಲಿರುವ ಎಷ್ಟೋ ಹಳ್ಳಿಗಳು 'ಗೋವಿಂದಾ' ಅಂತ ಮುಳುಗಿ ಹೋಗುತ್ತವೆ. ಹಾಗೆ ಮುಳುಗಿ ಹೋದರೆ ಎಷ್ಟೊಂದು ಪಶು ಪ್ರಾಣಿಗಳ ನಷ್ಟ! ಎಷ್ಟು ಜನ ನಷ್ಟ? ಎಷ್ಟು ಜೀವಗಳು ಮಣ್ಣುಪಾಲಾಗುವುವು! ಎಷ್ಟು ಕುಟುಂಬಗಳು ಅಳಿದು ಹೋಗುತ್ತವೆ! ದೇವರು ಏಕೆ ಇಷ್ಟು ಭೀಕರ ರೂಪ ತಾಳಿದನೋ? ಆ ಕಾರಣವಾಗಿ ಮರಣ ಹೊಂದಲೂ ಇಷ್ಟು ಜನ ಮಾಡಿರುವ ಪಾಪವಾದರೂ ಏನು?" ಎಂದು ಪರಿಪರಿ ವಿಧದಲ್ಲಿ ಯೋಚನೆಮಾಡಲು ಮೊದಲು ಮಾಡಿದರು.

ಜನರೆಲ್ಲಾ ಈರೀತಿ ಹಾಹಾಕಾರ ಮಾಡುತ್ತಿರುವ ಸಮಯದಲ್ಲಿ ಒಬ್ಬನಿಗೆ ಮೂರ್ಛೆ ಬಂದು, ಆ ಮೂರ್ಛೆಯಲ್ಲಿ ಒಂದು ಅಶರೀರ ವಾಣಿ "ಎಲೋ ಹೈದಾ, ಈ ಗ್ರಾಮದಲ್ಲಿರುವ ಮುದುಕಮ್ಮ ಎಂಬಾಕೆಯನ್ನು ಬಲಿ ಕೊಟ್ಟರೆ ಈ ಮಳೆ ಕೂಡಲೇ ನಿಂತು ಹೋಗುವುದು. ಆಪತ್ತು ತೊಲಗುವುದು" ಎಂದು ನುಡಿಯಿತಂತೆ.

ಕರ್ಣಕಠೋರವಾದ ಈ ಮಾತುಗಳನ್ನು ಕೇಳಿದವರೆಲ್ಲರ ಮೈ ಜುಂಮ್ಮೆಂದಿತು. ಮುದುಕಮ್ಮ ಅಂದರೆ ಆಕೆ ನಿಜವಾಗಿ ವೃದ್ಧಳಲ್ಲ. ಯುವತಿ. ಆಕೆಯ ಹೆಸರು ಮಾತ್ರ ಮುದುಕಮ್ಮ. ಆ ಮುದುಕಮ್ಮ ತುಂಬಾ ಪತಿವ್ರತೆ.

ಟಿ. ವಿಶಾಲಾಕ್ಷಮ್ಮ, ಮುಂಬಯಿ.



ಸುಂದರಿ. ಅತ್ತೆ ಮಾವಂದಿರಲ್ಲಿ ವಿನಯವಾಗಿಯೂ, ಗಂಡನಿಗೆ ಅನುಕೂಲವಾಗಿಯೂ ನಡೆದುಕೊಳ್ಳುತ್ತಿದ್ದಳು. ಉದಾರ ಚರಿತಳು. ವಿವೇಕಶಾಲಿನಿ. ಮುದುಕಮ್ಮನೆಂದರೆ ಊರಿನವರಿಗೆಲ್ಲಾ ಪ್ರಾಣ. ಎಲ್ಲರ ಪ್ರೀತಿ ಆದರಗಳಿಗೆ ಪಾತ್ರಳಾದ ಮುದುಕಮ್ಮ ಬಲಿಯಾಗಬೇಕೆ? ಯಾರಿಗೆ ಸರಿ ತೋರೀತು ಇಂತಹ ಮಾತು.

ಊರಿನಲ್ಲಿರುವವರೆಲ್ಲಾ ಕಂಗಾರು ಬಿದ್ದು ತೋರಿದಂತೆ ಮಾತನಾಡಿಕೊಳ್ಳುತ್ತಿದ್ದರೇ ಹೊರತು, ಈ ಮಾತು ಕಿವಿಗೆ ಬಿದ್ದಾಗ ಮುದುಕಮ್ಮ ಮಾತ್ರ ಇಂತಿಷ್ಟೂ ಕಳವಳ ಪಡಲಿಲ್ಲ!

" ಈ ವಾರ್ತೆ ಏನು? ಸಿಡಿಲು ಬಿದ್ದಹಾಗೆ ಬಂತಲ್ಲಾ" ಎಂದು ಗ್ರಾಮಸ್ಥರು ಒಂದು ಆಲದ ಮರದ ಕೆಳಗೆ ಸೇರಿ ಯೋಚಿಸುತ್ತಿರುವಲ್ಲಿ ಮುದುಕಮ್ಮ ಅಲ್ಲಿಗೆ ಬಂದು " ಅಯ್ಯಾ, ನೀವು ಏಕೆ ಚಿಂತೆ ಪಡುವಿರಿ? ಹುಟ್ಟಿದ ಪ್ರತಿ ಜೀವಿಯೂ ಸಾಯದೆ ತಪ್ಪುವಂತಿಲ್ಲ. ಈ ಪರಮ ಸತ್ಯವನ್ನು ದಿನಾ ನಾವು ಕಣ್ಣು ಮುಂದೆ ನೋಡುತ್ತಲೇ ಇರುವೆವು. ಹಾಗಿರುವಲ್ಲಿ ಸಾವೆಂದರೇಕೆ ಭಯಪಡುವುದು? ಬ್ರಹ್ಮ ಬರೆದ ಆಯುಸ್ಸು ಮುಗಿದ ಕೂಡಲೇ ಪಾತಾಳದಲ್ಲಿ ಅವಿತಿಟ್ಟುಕೊಂಡಿದ್ದರೂ ಪಾಶವನ್ನು ಹಾಕಿ ಎಳೆದುಕೊಂಡು ಹೋಗುತ್ತಾನೆ ಯಮಧರ್ಮರಾಯ. ಆದ್ದರಿಂದ ಪರಮೇಶ್ವರನ ಆಜ್ಞೆ ಯಾವಾಗ ಬರುವುದೋ ಎಂದು ನಿರೀಕ್ಷಿಸುತ್ತಾ, ಆ ಸಮಯ ಬಂದ ಕೂಡಲೇ ' ಇದೋ ಮಹಾನುಭಾವ, ನಿನ್ನ ಪಾದಗಳಡಿ ಬರುತ್ತಿದ್ದೇನೆ' ಎಂದು ಹೇಳಿ ಸಂತೋಷವಾಗಿ ಹೋಗಲು ಸಿದ್ಧವಾಗಿರಬೇಕು. ಅದು ಹೊರತು, ಒಂದು ನಿಮಿಷವಾದರೂ ಇಲ್ಲಿ ನಿಲ್ಲಲು ನಮ್ಮ ಇಷ್ಟವೇ? ಈ ಭೂಲೋಕವೆನ್ನುವುದು ಮತ್ತೊಂದು ಉತ್ತಮಲೋಕಕ್ಕೆ ನಮನ್ನು ಸೇರಿಸುವ ನಾವೆಯಂತೆ. ಆದ್ದರಿಂದ ನಾವು ಇಲ್ಲಿದ್ದಷ್ಟು ದಿನ ಒಳ್ಳೆಯವರಾಗಿ, ಕೈಲಾದ ಮಟ್ಟಿಗೆ ಪರೋಪಕಾರಮಾಡುತ್ತಾ ಕಾಲಕಳೆದು, 'ಕರೆ' ಬಂದ ಕೂಡಲೇ ಹೊರಟುಹೋಗಬೇಕು. ಅಷ್ಟೇ ಹೊರತು, ಎಷ್ಟುಕಾಲ ಬದುಕಿದ್ದರೆ ಮಾತ್ರ ತೃಪ್ತಿ ತೀರುತ್ತದೆ? ಅದಕ್ಕೆ ಒಂದು ಮಿತಿಯಿದೆಯೇ? ಆದ್ದರಿಂದಲೇ ' ಕಾಗೆಯಂತೆ



ಚಿರಕಾಲ ಬಾಳುವ ಬದಲು ಹಂಸದಂತೆ ಆರುತಿಂಗಳು ಜೀವಿಸಿದರೆ ಸಾಕು' ಎಂದು ಹೇಳುವರು ಹಿರಿಯರು. ಈಗ ಅಶರೀರವಾಣಿ ನನ್ನನ್ನು ಬಾ ಅಂತ ಹೇಳುತ್ತಿದ್ದರೆ, ನಾನು ಮುಕ್ತಳಾಗುವ ಸುಸಮಯ ಬಂತೆಂದು ಸಂತೋಷ ಪಡುತ್ತೇನೆ. ಇಷ್ಟು ಜನರ ಕ್ಷೇಮಕ್ಕೆ ಬಲಿಯಾಗುವುದಕ್ಕಿಂತಲೂ ಭಾಗ್ಯ ಬೇರೊಂದುಂಟೇ? ಈ ಅವಕಾಶ ಪುಣ್ಯವಶಾತ್ ಸಿಕ್ಕಿತೇ ಹೊರತು, ಸಾಮಾನ್ಯರಿಗೆ ಲಭಿಸುವುದೇ? ಆದ್ದರಿಂದ ಈ ವಿಷಯದಲ್ಲಿ ನನಗಾಗಿ ಯಾರೂ ಚಿಂತಿಸಬೇಕಾಗಿಲ್ಲ." ಎಂದು ಹೇಳಿದಳು.

ನಿರ್ಭೀತಿಯಾಗಿ, ನಿದಾನವಾಗಿ ನಿಶ್ಚಲಳಾಗಿ ಆ ಮುದುಕಮ್ಮ ಹೇಳಿದ ಮಾತು ಕೇಳಿ ಹಿರಿಯರೂ ಕಿರಿಯರೂ ದಿಗ್ಭ್ರಮೆ ಹೊಂದಿದರು.

ಈ ಸುದ್ದಿ ಕ್ರಮೇಣ ಹಬ್ಬಿ ಆಕೆಯ ಅತ್ತೆ ಮಾವಂದಿರಿಗೆ ತಿಳಿದಕೂಡಲೇ ಅವರು "ತಾಯಿ! ನೀನು ಭೂದೇವತೆಯೇ ಹೊರತು ಸಾಮಾನ್ಯಳಲ್ಲ. ನೀನಿಲ್ಲದೆ ನಿಮಿಷ ಮಾತ್ರವು ನಾವು ಜೀವಿಸಲಾರೆವು. ಆದುದರಿಂದ ನೀನು ಹೋಗಬೇಡ, ನಮ್ಮ ತಾಯಿ" ಎಂದು ಮುದುಕಮ್ಮನನ್ನು ಅಪ್ಪಿಕೊಂಡು ಅಳ ತೊಡಗಿದರು. ಆಕೆಯ ಗಂಡ ಅನೇಕ ವಿಧಗಳಲ್ಲಿ ಕೇಳಿಕೊಂಡ. ಕಣ್ಣೀರು ಧಾರಾಕಾರವಾಗಿ ಸುರಿಸಿದ.

ಯಾರು ಏನು ಹೇಳಿದರೂ ಮುದುಕಮ್ಮನ ಮನಸ್ಸು ಚಲಿಸಲಿಲ್ಲ. ಬಂಧುಗಳು ಕೇಳಿಕೊಂಡರೂ; ಗಂಡ ಪರಿಪರಿವಿಧದಲ್ಲಿ ವಿಲಪಿಸಿದರೂ ಆಕೆ ತನ್ನ ನಿರ್ಧಾರವನ್ನು ಬದಲಾಯಿಸಲಿಲ್ಲ. "ನನ್ನದೊಂದು ಜೀವ ಹೋದರೆ ಹೋಗಲಿ, ಪ್ರಪಂಚಕ್ಕೆ ಉಪಕಾರ ಮಾಡಬೇಕು. ಇಷ್ಟೊಂದು ಜನರ ಪ್ರಾಣಗಳನ್ನು ತೆರವಿಟ್ಟು, ನಾನು ಜೀವಿಸುವುದರಲ್ಲಿ ಸೌಖ್ಯವೇನಿದೆ? ಲೋಕೋಪಕಾರಕ್ಕೆ ಬಲಿಯಾದ ಪತಿವ್ರತೆಯರನ್ನು ಕುರಿತು ಪುರಾಣಗಳನ್ನು ಕೇಳಿದ್ದೇವೆ, ಚರಿತ್ರೆ ಓದಿದ್ದೇವೆ. ನಾನೂ ಅವರಂತೆ ಪರರಿಗಾಗಿ ಪ್ರಾಣವನ್ನು ಅಂಕಿತ ಮಾಡಬೇಕೆಂದು ಕುತೂಹಲದಿಂದಿರುವೆನು. ಹಾಗೆ ತನುವನ್ನು ಅರ್ಪಿಸುವುದೇ ನನಗೆ ಮಹದಾನಂದ." ಎಂದು ತನ್ನ ನಿಶ್ಚಯವನ್ನು ತಿಳಿಯಪಡಿಸಿದಳು.

ಈ ನಿಶ್ಚಯದಿಂದ ಮುದುಕಮ್ಮ ಸೊಗಸಾಗಿ ತಲೆ ಬಾಚಿ, ಮುಖದ ತುಂಬಾ ಅರಸಿನ ಬಳಿದು, ದೊಡ್ಡ ಕುಂಕುಮದ ಬೊಟ್ಟು ಇಟ್ಟುಕೊಂಡು, ಹಳದಿ ಸೀರೆಯುಟ್ಟು, ಬಾಜಾಬಜಂತ್ರಿಗಳೊಂದಿಗೆ ಹೊರಟು ಕೆರೆ ಕಟ್ಟೆಯ ಹತ್ತಿರ ಬಂದಳು.

ಜನ ಕಿಕ್ಕಿರಿದು ನೆರೆದಿದ್ದರು. ಮರಳು ಎರಚಿದರೆ ಕೆಳಗೆ ಬೀಳದಷ್ಟು ಒತ್ತಾಗಿತ್ತು ಪ್ರಜಾಸಮುದಾಯ. ಸಣ್ಣ ಕಡ್ಡಿ ಬಿದ್ದರೂ ಕೇಳಿಸುವಷ್ಟು ನಿಶಬ್ದವಾವರಿಸಿತ್ತು. ಆ ಕೆರೆಯ ಹತ್ತಿರ ಸೇರಿದ್ದವರೆಲ್ಲರ ದೃಷ್ಟಿ ಮಂದಹಾಸದಿಂದ ನಿಂತಿದ್ದ ಆ ಮುದುಕಮ್ಮನ ಕಡೆಗಿತ್ತು. ಆ ಅಪೂರ್ವವಾದ ದೃಶ್ಯವನ್ನು ಪ್ರತಿಮೆಗಳಂತೆ ನಿಂತು ಎಲ್ಲರೂ ಆಶ್ಚರ್ಯದಿಂದ ನೋಡುತ್ತಿದ್ದರು.

ಮುದುಕಮ್ಮ ಮನಸ್ಸಿನಲ್ಲಿ ಯಾವುದೇ ವಿಧವಾದ ಹೆದರಿಕೆ ಬೆದರಿಕೆಗಳಿಲ್ಲದೆ ತೇಜಃಪುಂಜವಾದ ಮುಖದಿಂದ ಕೆರೆಯದಡದಲ್ಲಿ ಮಹಾಲಕ್ಷ್ಮಿಯಂತೆ ನಿಂತಿದ್ದಳು. ಅತ್ತೆ ಮಾವಂದಿರಿಗೆ ಭಕ್ತಿಯಿಂದ ನಮಸ್ಕಾರ ಮಾಡಿದಳು. ಗಂಡನಿಗೆ ಕಡೆಯಸಾರಿ ಪ್ರಣಾಮ ಮಾಡಿ "ಅಪ್ಪಣೆ ತೆಗೆದುಕೊಳ್ಳುತ್ತಿದ್ದೇನೆ" ಎಂದಳು. ಅತ್ತೆಯ ಮನೆಗೆ ಹೋಗುವ ಹೆಣ್ಣು ಮಗಳಂತೆ ಎಲ್ಲರ ಅಪ್ಪಣೆ ಬೇಡಿದಳು. ಮಳೆರಾಯನಿಗೆ ನಮಸ್ಕಾರ ಮಾಡಿದಳು. ಕಣ್ಣುಗಳನ್ನು ಮುಚ್ಚಿಕೊಂಡಳು. ಅಗ್ನಿಪ್ರವೇಶ ಮಾಡ ಹೋಗುವ ಸೀತೆಯಂತೆ, ಕಾರ್ಗತ್ತಲೆಯಲ್ಲಿ ನುಗ್ಗುವ ಚಂದ್ರಮತಿಯಂತೆ ಧಡಮ್ಮನೆ ಕೆರೆಯೊಳಕ್ಕೆ ಧುಮಿಕಿ ಮಾಯವಾದಳು.

ಅಶರೀರವಾಣಿ ನುಡಿದಂತೆ ಮುದುಕಮ್ಮನ ಪ್ರಾಣತ್ಯಾಗದಿಂದ ಆಗಿನ ಅತಿವೃಷ್ಟಿ ನಿಂತು ಹೋಯಿತಂತೆ. ಈಗಲೂ ಆ ಊರಿನ ಕೆರೆಯ ಏರಿಗೆ 'ಮುದುಕಮ್ಮನ ಕೆರೆಕಟ್ಟೆ' ಎಂದು ಹೆಸರಿದೆ. ಬುಕ್ಕರಾಯಸಮುದ್ರದ ಪ್ರಾಂತದವರೆಲ್ಲಾ ಇಂದಿಗೂ ಆ ಮುದುಕಮ್ಮನನ್ನು ಒಂದು ದೇವತೆಯಂತೆ ಪೂಜಿಸಿ ಪ್ರತಿ ವರ್ಷ ಪೊಂಗಲೂ ಮತ್ತು ಬಗೆ ಬಗೆಯ ತಿಂಡಿ ತಿನಸುಗಳನ್ನು ಮಾಡಿ ಆಕೆಗೆ ನೈವೇದ್ಯಕ್ಕೆ ಇಟ್ಟು ಆರಾಧನೆ ಮಾಡುವರು.






ಉಡಿಪಿಯಲ್ಲಿ ಮಹಾಬಲರಾಯರು ಒಬ್ಬ ಸಂಪನ್ನ ಗೃಹಸ್ಥರು. ಅವರ ಹೆಂಡತಿ ಅಕ್ಕಮ್ಮ. ಅವರಿಗೆ ಸಿರಿ ಸಂಪತ್ತುಗಳಿಗೇನೂ ಕೊರತೆಯಿರಲಿಲ್ಲ. ಅದೃಷ್ಟಬಲದಿಂದ ಜನಿಸಿದ ಐವರು ಗಂಡು ಮಕ್ಕಳು ಬೆಳೆದು ದೊಡ್ಡವರಾದರು. ಅವರಿಗೆಲ್ಲರಿಗೂ ಲಕ್ಷಣವಾಗಿ ಮದುವೆಗಳೂ ಆದವು. ಎಲ್ಲರೂ ಒಟ್ಟಿಗೆ ಹಾಯಾಗಿ ಸಂಸಾರ ಮಾಡಿಕೊಂಡಿದ್ದರು.

ಅಕ್ಕಮ್ಮನ ಸೊಸೆಯರಲ್ಲಿ ಮೊದಲ ನಾಲ್ವರ ತೌರು ಮನೆಯವರು ಸಾಮಾನ್ಯ ಕುಟುಂಬದವರು. ಕಿರಿಯಾತನ ಮಡದಿ ಸಾವಿತ್ರಿ ಮಾತ್ರ ಜಿಲ್ಲಾ ಜಡ್ಜರ ಮಗಳಾದುದರಿಂದ ಆ ಹುಡುಗಿಯನ್ನು ಅತ್ತೆ ಮತ್ತು ವಾರಗಿತ್ತಿಯರೂ ಅಕ್ಕಪಕ್ಕದವರೂ ವಿಶೇಷ ವ್ಯಕ್ತಿಯಂತೆ ನೋಡಿಕೊಳ್ಳುತ್ತಿದ್ದರು.

"ಅಕ್ಕಮ್ಮನವರ ಕಿರಿಸೊಸೆ ಅಂದದ ಗೊಂಬೆಯಂತೆ; ಜಡ್ಜರ ಮಗಳಂತೆ" ಎಂದು ನೆರೆಹೊರೆಯ ಹೆಣ್ಣು ಮಕ್ಕಳು ಹತ್ತು ಜನವೂ ಹೇಳುತ್ತಿದ್ದರೆ, ಈ ವಿಷಯ ಬಾಯಿಂದ ಬಾಯಿಗೆ ಹರಡಿ ಪೇಟೆಯಲ್ಲಿರುವ ವನಜಾಕ್ಷಮ್ಮನವರ ಕಿವಿಗೂ ಬಿತ್ತು. ವನಜಾಕ್ಷಮ್ಮನವರೆಂದರೇನು ಸಾಮಾನ್ಯವೇ? ಆಕೆ ಒಬ್ಬ ಕೋಟೇಶ್ವರನ ಮಗಳು. ಜಮೀನುದಾರರ ಪತ್ನಿ!

ಆಕೆಗೆ ಸಾವಿತ್ರಿಯನ್ನು ನೋಡಿ ಬರುವ ಮನೀಷೆಯುಂಟಾಗಿ ಒಂದು ದಿನ ಅಕ್ಕಮ್ಮನವರ ಮನೆಗೆ ಹೊರಟಳು. ಯಾವಾಗಲೂ, ಎಲ್ಲಿಗೂ ಹೋಗದ ವನಜಾಕ್ಷಮ್ಮ ತಮ್ಮ ಮನೆಗೆ ಬಂದಳೂ ಅಂದರೆ ಎಷ್ಟು ದೊಡ್ಡಸ್ತಿಕೆ?

ಆದುದರಿಂದ ಅಕ್ಕಮ್ಮನವರಿಗೆ ನಿಜವಾಗಿ ಹೆಮ್ಮೆಯಾಯಿತು. ದೊಡ್ಡ ಮನುಷ್ಯರಿಗೆ ಮಾಡುವ ಮರ್ಯಾದೆಗಳೆಲ್ಲವನ್ನೂ ಲೋಪದೋಷಗಳಿಲ್ಲದಂತೆ ವನಜಾಕ್ಷಮ್ಮನವರಿಗೆ ಆಕೆ ಸಲ್ಲಿಸಿದಳು.

ಎಲ್ಲಾ ಆಯಿತು. ಇನ್ನು ತಾಂಬೂಲ ಕೊಡಬೇಕಾದ ಸಮಯ ಬಂತು. ವನಜಾಕ್ಷಮ್ಮನಂತಹ ಶ್ರೀಮಂತಳಿಗೆ ಬಂಗಾರದ ತಟ್ಟೆಯಿಲ್ಲದಿದ್ದರೆ ಹೋಗಲಿ, ಬೆಳ್ಳಿ ತಟ್ಟೆ

ಕೆ. ಚಿಟ್ಟ, ಪಾರ್ವತೀಪುರ



ಯಲ್ಲಾದರೂ ಕೊಡದಿದ್ದರೆ ಚೆನ್ನಾಗಿರುತ್ತದೆಯೇ? ಅದಕ್ಕೇನು ಮಾಡುವುದೆಂದು ಅಕ್ಕಮ್ಮ ಆಲೋಚಿಸ ತೊಡಗಿದರು.

ಇದ್ದಕ್ಕಿದ್ದಂತೆಯೇ ಧ್ವನಿ ಏರಿಸಿ "ಏನಾಯಿತ್ರೀ, ಬೆಳ್ಳಿ ತಟ್ಟೆ? ಹೊರಟುಹೋದಂತೇ ಅಂತ ಕಾಣುತ್ತೇ?" ಎಂದು ಹೂಂಕರಿಸಿದಳು.

"ಎಷ್ಟು ಸೊಗುಸಾದ ಬಂಗಾರದ ಹೂಗಳಿದ್ದವು ಸುತ್ತಲೂ" ಎಂದು ಉದ್ಗಾರವೆಳೆದಳು ಹಿರಿ ಸೊಸೆ.

"ಹೂವಿನ ಮಾತಿಗೇನು-ಆ ಚಿತ್ರಕೆಲಸ! ಕಾಶ್ಮೀರದ ತಟ್ಟೆಗಳ ನಮೂನೆಯಂತೆ ಕಣ್ಣಿಗೆ ಕಟ್ಟುವಂತೆ ಇಳಿಸಿಬಿಟ್ಟಿದ್ದ ಅಕ್ಕಸಾಲಿ" ಎಂದು ಆಶ್ಚರ್ಯ ಸೂಚಿಸಿದಳು ಎರಡನೇ ಸೊಸೆ.

"ಚಿತ್ರ ಕೆಲಸದ ಮಾತಿಗೇನು ಬಿಡಕ್ಕ, ಅವನು ಕೊಟ್ಟ ಮೆರುಗು ಅಸಲು ಈ ಇಂಡಿಯಾ ದೇಶದಲ್ಲಿ ಮತ್ತೆ ಯಾರಾದರೂ ಕೊಡಬಲ್ಲರೇ ಅಂತ ಕೇಳ್ತೇನೆ" ಎಂದು ಸವಾಲು ಮಾಡುತ್ತಾ ಮಾತನಾಡಿದಳು ಮೂರನೇಯಾಕೆ.

"ಏನೋಮ್ಮಾ, ನಮ್ಮ ಬೆಳ್ಳಿತಟ್ಟೆ ಅದಕ್ಕೆ ಅದೇ ಸಾಟಿ. ಅದೇ ರೀತಿ ಮಾಡಿಸಿಕೊಳ್ಳಬೇಕೆಂದು ಹೇಳಿ ಮೋಹಪಟ್ಟು ಎಷ್ಟೊಂದು ಜನ ನೋಡಿಕೊಂಡು ಹೋಗುತ್ತಿರಲಿಲ್ಲ. ಒಬ್ಬರ ಕೈಯಲ್ಲಾದರೂ ಆಯಿತೇ?" ಎಂದು ವರ್ಣಿಸಿದಳು ನಾಲ್ಕನೆಯವಳು.

"ಆ ಒಂದು ವಜ್ರ ಹಾಕಿದ್ದರಿಂದ ಎರಡು ಸಾವಿರದ ಐನೂರು ಮೀರಿತು. ಆಹಾ! ತಟ್ಟೆ ಅಂದರೆ ಸಾಧರಣ ತಟ್ಟೆಯೇ? ಅನ್ಯಾಯವಾಗಿ ಹೋಯಿತು." ಎಂದು ಅಕ್ಕಮ್ಮ ಮಧ್ಯ ತನ್ನ ಬಾಯಿ ಹಾಕಿದಳು.

ಈ ರೀತಿ ಅಕ್ಕಮ್ಮ ಮತ್ತು ಆಕೆಯ ಸೊಸೆಯರು ಆ ಬೆಳ್ಳಿ ತಟ್ಟೆಯನ್ನು ವರ್ಣಿಸುವುದರಲ್ಲಿಯೇ ಒಂದು ಅರ್ಧ ಗಂಟೆ ಕಳೆಯಿತು. ಬಂದಾಕೆ ಎಷ್ಟು ಹೊತ್ತು ಕುಳಿತಿರುತ್ತಾಳೆ? ಮಣೆಯ ಮೇಲಿಂದ ಎದ್ದು ಒಂದು ಸಾರಿ ಆಕಳಿಸಿದಳು. ಅದನ್ನು ಕಂಡು ಅಕ್ಕಮ್ಮ ಆಕೆಯ ಹತ್ತಿರ ಬಂದು "ಅಯ್ಯೋ ಬಹಳ ಹೊತ್ತಾಗಿಬಿಡ್ತನ್ಮಾ, ನಿಮ್ಮನ್ನು ಸುಮ್ಮನೆ ಕೂರಿಸಿಬಿಟ್ಟೆ, ತಿಳಿಗೇಡಿ" ಎಂದು ತಾನು

ಅಕಾರಣವಾಗಿ ಆಲಸ್ಯ ಮಾಡಿದುದನ್ನು ಮುಚ್ಚಿಡಲು ಪ್ರಯತ್ನಿಸಿದಳು.

"ಅದಕ್ಕೇನು ಬಿಡಿ,ಅಕ್ಕಮ್ಮ. ಮತ್ತೆ ನಾನು ಹೋಗಿಬರ್ತೇನೆ." ಎಂದಳು ವನಜಾಕ್ಷಮ್ಮ.

"ಅಯ್ಯೋ ತಾಂಬೂಲ ತೆಗೆದುಕೊಳ್ಳದೆ ಹೋಗ್ತೀರಾ? ಹುಡುಗುಮುಂಡೇವು, ಬೆಳ್ಳಿ ತಟ್ಟೆ ಎಲ್ಲಿ ಬಿಸಾಡಿದರೋ? ವಜ್ರಗಳು ಹುದುಗಿಸಿದ್ದ ತಟ್ಟೆಯಮ್ಮ ಅದು. ಎರಡೂವರೆ ಸಾವಿರ ವಾಯಿತು...." ಎಂದು ಹೇಳ್ತಿರುವಲ್ಲಿ, "ಆ....ನಮ್ಮ ಮನೆಗೆ ಬೆಳ್ಳಿತಟ್ಟೆ ಏಕೇಂದ್ರೆ? ಈ ಮರ್ಯಾದೆಗಳೆಲ್ಲಾ ಏಕೆ? ಕೈಯಲ್ಲಿ ಕೊಡಿಅಂದ್ರೆ ಸರಿಹೋಗುತ್ತೆ" ಎಂದಳು ವನಜಾಕ್ಷಮ್ಮ.

"ಒಳ್ಳೇ ಮಾತು ಹೇಳಿದ್ರಿ. ಇಂದು ಇದು ಹೋಯಿತು ನಾಳೆ ಮತ್ತೊಂದು ಹೋಗುತ್ತೆ. ಅಸಲು ಅದೇನಾಯಿತೋ ತಿಳಿದುಕೊಳ್ಳಬೇಡವೇ?" ಎಂದರು ಅಕ್ಕಮ್ಮ,ಅದೊಂದು ತರಹ ಮುಖ ಮಾಡಿ. "ಎಲ್ಲಿಗೂ ಹೋಗೋದಿಲ್ಲಾಂದ್ರೆ ಎಲ್ಲಾ ನಿಮ್ಮ ಭ್ರಾಂತು. ನಿಮ್ಮದೇನು ಕಡಿಮೇ ಸಾಮಾನೇ? ಯಾವುದರಲ್ಲೋ ಸೇರಿ ಹೋಗಿಬಿಟ್ಟಿರಬೇಕು. ಎತ್ತಿಕೊಂಡು ಹೋಗಲು ಹೊರಗಿನವರು ಯಾರು ಬರ್‍ತಾರೆಹೇಳಿ? ಹುಲಿಗಳಂತೆ ನೀವು ಓಡಾಡುತ್ತಿರುತ್ತೀರಿ" ಎಂದು ಧೈರ್ಯ ಹೇಳಿದಳು ವನಜಾಕ್ಷಮ್ಮ.

"ಆ ಮಾತು ನಿಜವೇಅನ್ನಿ. ನಮ್ಮ ಕೆಲಸದವಳು ಇದಾಳೆ ನೋಡಿ, ಇಂದಿಗೆ ಬಂದು



ಹತ್ತು ವರ್ಷವಾಯಿತು. ಎಂದೂ ಒಂದು ಪೊರಕೆ ಕಡ್ಡಿ ಸಹ ತೆಗೆದುಕೊಂಡು ಹೋಗಿ ಅರಿಯಳು" ಎಂದರು ಅಕ್ಕಮ್ಮ.

"ನೀವೇನೂ ಯೋಚಿಸಬೇಡಿ ಅಕ್ಕಮ್ಮ, ನೆಮ್ಮದಿಯಾಗಿ ಹುಡಿಕಿದರೆ ಸಿಕ್ಕಿ ಬಿಡುತ್ತದೆ. ಇನ್ನೊಂದು ಸಾರಿ ನಾನು ಬಂದಾಗ ಬೆಳ್ಳಿತಟ್ಟೆ ಯಾಕೆ, ನಮ್ಮ ಸಾವಿತ್ರಿ ತಂದೆಯವರು ಬಂಗಾರದ ತಟ್ಟೆಯನ್ನೇ ಮಾಡಿಸುತ್ತಾರೆ. ಅದುವರೆವಿಗೂ ಆ ಪ್ಲಾಸ್ಟಿಕ್ ತಟ್ಟೆಯಲ್ಲಿಟ್ಟು ಕೊಡೀಂದ್ರೆ ಸರಿಹೋಗುತ್ತೆ. ನಾನೇನು ಹೊರಗಿನವಳೇ, ಏನಾದರೂ ತಿಳಿದು ಕೊಳ್ಳಲು?" ಎಂದಳು ವನಜಾಕ್ಷಮ್ಮ.

ಆಕೆ ಹೇಳಿದ ಮಾತುಗಳಿಗೆ ತೃಪ್ತಿಗೊಂಡು ಅಕ್ಕಮ್ಮನವರು ವೀಳ್ಯೆದೆಲೆಯನ್ನು ಪ್ಲಾಸ್ಟಿಕ್

ತಟ್ಟೆಯಲ್ಲಿ ತಂದಿಟ್ಟರು. ಎಲ್ಲರೂ ಸ್ವಲ್ಪ ಹೊತ್ತು ಕುಳಿತುಕೊಂಡು ಹರಟೆ ಕೊಚ್ಚಿದರು. ವನಜಾಕ್ಷಮ್ಮ ಎದ್ದು ಹೊರಡುತ್ತಾ "ಮತ್ತೆ ಭಾನುವಾರ ನೀವು ತಪ್ಪದೆ ನಮ್ಮ ಮನೆಗೆ ಬರಬೇಕು" ಎಂದು ಮತ್ತೆ ಮತ್ತೆ ಹೇಳಿ ಹೋದಳು.

ಭಾನುವಾರ ಬಂತು. ವನಜಾಕ್ಷಮ್ಮನವರ ಮನೆಗೆ ಅಕ್ಕಮ್ಮನವರೇ ಹೋಗಬೇಕೆಂದಿದ್ದರು. ಆದರೆ ಏನೋ ಅಡ್ಡಿಯೊದಗಿ, ಹಿರಿಯ ಸೊಸೆಯನ್ನು ತಮ್ಮ ಬದಲು ಕಳುಹಿಸಿದರು. ಹಿರಿ ಸೊಸೆ ಹೊಸ್ತಿಲಲ್ಲಿ ಕಾಲಿಟ್ಟಕೂಲೇ ವನಜಾಕ್ಷಮ್ಮ "ಏನಮ್ಮ ಸೀತಾ, ನಿಮ್ಮ ಬೆಳ್ಳಿತಟ್ಟೆ ಸಿಕ್ಕಿತೇ?" ಎಂದು ಆತುರದಿಂದ ಕೇಳಿದಳು.

"ಆ, ಇನ್ನೊಂದು ತಿಂಗಳಿಗೆಲ್ಲಾ ಅದೇ ಕಾಣಿಸುತ್ತೆ" ಎಂದು ಪಕಪಕ ಅಂತ ನಕ್ಕಳು ಸೀತೆ. ವನಜಾಕ್ಷಮ್ಮನವರಿಗೆ ಇದೇನೂ ಅರ್ಥವಾಗದೆ ಮತ್ತೆ ಮತ್ತೆ ಕೇಳಿದಳು. ಅದಕ್ಕೆ ಸೀತೆ "ಅಸಲು ನಮಗೆ ಬೆಳ್ಳಿತಟ್ಟೆಯಿದ್ದರಲ್ಲವೇ ಕಳೆದುಹೋಗಲು?" ಎಂದು ಉತ್ತರವಿತ್ತಳು.

"ನಿಮ್ಮ ಮನೆ ಬಂಗಾರವಾಗ! ಏನೂ ಇಲ್ಲದೆ ಅಷ್ಟೊಂದು ನಾಟಕ ಆಡಿದರೆ ನಿಮ್ಮ ಅತ್ತೆ" ಎಂದು ಆಶ್ಚರ್ಯ ಸೂಚಿಸಿದಳು ವನಜಾಕ್ಷಮ್ಮ.

"ಹೌದು, ಹಾಗೇ ಮಾಡ್ತಿರ್‍ತಾರೆ. ಇಲ್ಲದಿದ್ದರೆ ನಿಮ್ಮಂತಹವರು ಬಂದಾಗ ನಮ್ಮ ಮರ್ಯಾದೆ ಹೇಗೆ ಉಳಿಯುತ್ತದೆ? ಇನ್ನೇನು ಬಿಡಿ, ಸುಮ್ಮನಿದ್ದರೆ ಒಂದು ತಿಂಗಳೊಳಗೆ ನಮ್ಮ ಸಾವಿತ್ರಿ ತಂದೆಯವರು ಬೆಳ್ಳಿತಟ್ಟೆ ಕಳುಹಿಸಿಕೊಡುತ್ತೇನೆ ಎಂದು ಬರೆದಿದ್ದಾರೆ. ನಮ್ಮ ಮನೆಯವರೆಲ್ಲಾ ಇನ್ನೂ ನಾಟಕವಾಡಬೇಕಾದ ಕಷ್ಟ ತಪ್ಪುತ್ತೆ" ಎಂದು ಮನೆಗುಟ್ಟು ಹೊರಗೆಡವಿದಳು.

"ಎಂತೆಂತಹ ವಿಚಿತ್ರ ಜನರಿದ್ದಾರಪ್ಪಾ ಈ ಪ್ರಪಂಚದಲ್ಲಿ! ನಿಮ್ಮ ಮನೆಗೆ ನಾನು ಬಂದಿದ್ದೇ ತಪ್ಪಾಯಿತು" ಎಂದು ಮೂಗಿನ ಮೇಲೆ ಕೈಯಿಟ್ಟುಕೊಂಡಳು ವನಜಾಕ್ಷಮ್ಮ.

"ಅಯ್ಯೋ, ಹಾಗೆ ಹೇಳಬೇಡೀಂದ್ರೆ ನೀವು ಬಂದ ಮುಹೂರ್ತ ಇಷ್ಟು ಬೇಗ ನಮ್ಮ ಮನೆಗೆ ಒಂದು ಬೆಳ್ಳಿತಟ್ಟೆ ಬರುವ ಹಾಗಾಗಿದೆ" ಎಂದಳು ಸೀತೆ.






ಗೋದಾವರಿ ಪ್ರಾಂತ್ಯದಲ್ಲಿ ದ್ರಾಕ್ಷಾರಾಮ ಎಂಬ ಒಂದು ಕ್ಷೇತ್ರವಿದೆ. ಪೂರ್ವಕಾಲದಲ್ಲಿ ಅಲ್ಲಿ ವೇಮುಲವಾಡ ಭೀಮಕವಿ ಎಂಬ ಒಬ್ಬ ಮಹಾಕವೀಶ್ವರನಿದ್ದನು. ದ್ರಾಕ್ಷಾರಾಮದಲ್ಲಿ ನೆಲೆಸಿದ ಭೀಮೇಶ್ವರಸ್ವಾಮಿಯ ಅನುಗ್ರಹದಿಂದ ಹುಟ್ಟಿದ ಪ್ರಯುಕ್ತ, ಆ ದೇವರ ಹೆಸರೇ ಆ ಕವಿಗೆ ಬಂತೆಂದು ಜನ ಹೇಳಿಕೊಳ್ಳುತ್ತಾರೆ.

ಭೀಮಕವಿ ವರಪ್ರಸಾದಿ. ಆದ್ದರಿಂದ ದೇವರು ಆತನಿಗೆ ಅದ್ಭುತ ಶಕ್ತಿಗಳನ್ನು ಕೊಟ್ಟನೆಂದೂ, ಆ ಮಹಿಮೆಯಿಂದ ಆತನು ಶತ್ರುಗಳನ್ನು ಸೋಲಿಸಿ ಗಣ್ಯಪುರುಷನಾದನೆಂದೂ ವದಂತಿ ಇದೆ. ಭೀಮಕವಿಗಿರುವ ಮಹಿಮೆಗಳಲ್ಲೆಲ್ಲಾ ಮುಖ್ಯವಾದುದೆಂದರೆ ಹೇಳಲ ಸದಳವಾದ ವಾಕ್ಶುದ್ಧಿ, ಎಂದರೆ ಆತನ ಬಾಯಿಯಿಂದ ಯಾವ ಮಾತು ಹೊರಟರೂ ಅದು ನಡೆದೇ ತೀರುವುದು.

ತನ್ನ ಪ್ರತಿಭೆ, ಪಾಂಡಿತ್ಯಗಳನ್ನು ಪ್ರಕಟಿಸುತ್ತಾ ಹೋಗಿ ಭೀಮಕವಿ ಅನೇಕ ಮಂದಿ ರಾಜ ಮಹಾರಾಜರುಗಳನ್ನು ಸಂದರ್ಶಿಸಿ, ಅವರನ್ನು ಮೆಚ್ಚಿಸಿ, ಎಷ್ಟೋ ಬಹುಮಾನಗಳನ್ನು ಪಡೆಯುತ್ತಿದ್ದನು. ಆತನು ಆ ರೀತಿ ಸಂಚಾರ ಮಾಡುತ್ತಾ ಮಾಡುತ್ತಾ ಒಂದು ಸಾರಿ ಸಜ್ಜನಗರನನ್ನು ಪರಿಪಾಲಿಸುತ್ತಿದ್ದ ಕಳಿಂಗಗಂಗೂ ಎಂಬ ರಾಜನನ್ನು ನೋಡಲು ಹೋದನು.

'ವೇಮುಲವಾಡ ಭೀಮಕವಿ ಆಳುವ ಮಹಾಸ್ವಾಮಿಯವರ ದರ್ಶನಾಕಾಂಕ್ಷನಾಗಿ ಬಂದಿದ್ದಾನೆ. ಅಪ್ಪಣೆ ಏನು?' ಎಂಬ ವರ್ತಮಾನ ಕಳುಹಿಸಿದನು. ತುಸಹೊತ್ತಿಗೆ ನೌಕರನು ಬಂದು "ಮಹಾಸ್ವಾಮಿಯವರಿಗೆ ಈಗ ಕೆಲಸದ ಗೊಂದಲ ಬಹಳವಿದೆ. ಆದುದರಿಂದ ದರ್ಶನಕೊಡಲು ಸಾಧ್ಯವಿಲ್ಲ" ಎಂದು ಉತ್ತರ ಹೇಳಿದನು.

ಈ ಉತ್ತರ ಕೇಳಿದಕೂಡಲೇ ಭೀಮಕವಿ ಬುಸ್ ಎಂದ. ಮೊದಲೇ ಆತ ತಿಕ್ಕಲು, ಮುಂಗೋಪಿ. ಹಾಗಿರುವಾಗ ಇಂತಹ ಉತ್ತರಕೊಟ್ಟರೆ ಆತನಿಗೆಷ್ಟು ಕೋಪ ಬರುತ್ತೆಂಬುದನ್ನು ನೀವೇ ಊಹಿಸಿ. "ಈ ರಾಜನೆಷ್ಟು, ಇವನ ಬದುಕೆಷ್ಟು, ನನ್ನಂತಹವನು

ತೆಲಗು ಕಥೆಯಿಂದ



ಸಾಧಿಸಿ ದಂಡೆತ್ತಿ ಬಂದು ಕಳಿಂಗಗಂಗನನ್ನು ಅತಿ ಸುಲಭವಾಗಿ ಸೋಲಿಸಿ, ರಾಜ್ಯವನ್ನು ಆಕ್ರಮಿಸಿಕೊಂಡನು.

ಕಳಿಂಗಗಂಗು ಮಾಡುವುದಾದರೂ ಏನಿದೆ? ತನ್ನ ಮಡದಿ ಮಕ್ಕಳನ್ನು ಮಾವನ ಮನೆಯಲ್ಲಿ ಬಿಟ್ಟು 'ಬದುಕಿದರೆ ಸಾಕು' ಎಂದು ತಲೆಮರೆಸಿಕೊಂಡು ಎಲ್ಲಿಗೋ ಓಡಿ ಹೋದನು. ಇದೇ ವೇಷದಲ್ಲಿದ್ದರೆ ಶತ್ರು ರಾಜ ತನ್ನನ್ನು ಹುಡುಕಿಸಿ ಸೆರೆ ಹಿಡಿಯುವ ನೆಂಬ ಭಯದಿಂದ ವೇಷವನ್ನು ಬದಲಾಯಿಸಿ, ಬೇರೆ ಹೆಸರನ್ನಿಟ್ಟುಕೊಂಡು ಅಜ್ಞಾತವಾಗಿ ಜೀವಿಸಲಾರಂಭಿಸಿದನು.

ಬಂದರೆ ದರ್ಶನಕೊಡಲು ಸಮಯವಿಲ್ಲ ವಾಯಿತಲ್ಲವೇ? ಪಾಪ, ಈ ಗೊಂದಲವೆಲ್ಲಾ ಕೆಲವು ಕಾಲದಲ್ಲೇ ಮುಗಿಯುತ್ತದೆ ಎಂತ ಹೇಳು" ಎಂದು ಹೇಳಿ ಶಾಪಕೊಟ್ಟು ಹೊರಟುಹೋದನು.

ಭೀಮಕವಿ ಹೊರಟುಹೋದ ಮತ್ತೆ ಸ್ವಲ್ಪ ದಿನಗಳಲ್ಲೇ ಕಳಿಂಗಗಂಗನ ರಾಜ್ಯ ಅರಾಜಕ ವಾಗಹತ್ತಿತು. ಆತನಮಂತ್ರಿಗಳು ಒಳಸಂಚು ಹೂಡಿದರು. ಅಧಿಕಾರಿಗಳು ಲಂಚ ಪಡೆ ಯಲು ಪ್ರಾರಂಭಿಸಿದರು. ಸೇನಾಧಿಪತಿಗಳು ದ್ರೋಹವೆಣಿಸಿದರು. ಇದರೊಂದಿಗೆ ಆತನ ಅಜಾಗ್ರತೆಯೂ ಹೆಚ್ಚಾಯಿತು. ಸ್ಥಿತಿಗತಿ ಗಳು ಹೀಗಿರಲು ಶತ್ರು ರಾಜನಿಗೆ ತುಂಬಾ ಅನುಕೂಲವಲ್ಲವೇ? ಈತನ ವಿಷಯವೆಲ್ಲ ವನ್ನೂ ತಿಳಿದಿದ್ದ ಶತ್ರುರಾಜನು ಸಮಯ

ಆತನು ಎಣಿಸಿದ್ದಂತೆಯೇ ಶತ್ರು ರಾಜನು ಚಾರರನ್ನು ಕಳುಹಿಸಿ, ಕಳಿಂಗಗಂಗನಿಗಾಗಿ ದೇಶದಲ್ಲೆಲ್ಲಾ ಹುಡಿಕಿಸಿದನು. ಎಷ್ಟು ಕಾಲ ವಾದರೂ ಆತನ ಸುಳಿವು ತಿಳಿಯದಿರಲು, "ಇನ್ನೇನು, ಈ ವೇಳೆಗೆ ಅವನು ಎಲ್ಲೋ ಸತ್ತೇ ಹೋಗಿರಬಹುದು. ಇನ್ನು ನಮಗೆ ಭಯವಿಲ್ಲ." ಎಂದುಕೊಂಡು ಎದೆಯ ಮೇಲೆ ಕೈಯಿಟ್ಟುಕೊಂಡು ಹಾಯಾಗಿ ನಿದ್ದೆ ಮಾಡುತ್ತಿದ್ದನು.

ಪಾಪ, ಕಳಿಂಗಗಂಗು ಯಾವುದೋ ಛತ್ರ ದಲ್ಲಿ ಒಂದಿಷ್ಟು ಕವಳತಿಂದು, ಕಣ್ಣಿಗೆ ಕಂಡು ಬಂದ ಮಠದಲ್ಲಿ ಮಲಗುತ್ತಾ, ಕಾಲುಗಳು ಎಳೆದುಕೊಂಡು ಹೋದಷ್ಟು ದೂರ ನಡೆ ಯುತ್ತಾ, ಒಂದೊಂದು ದಿನವನ್ನೂ ಒಂ ದೊಂದು ಯುಗವಾಗಿ ಕಳೆಯುತ್ತಿದ್ದನು.



ಒಂದುರಾತ್ರಿ ಕಳಿಂಗಗಂಗನು ಒಂದು ಪಟ್ಟಣವನ್ನು ಸೇರಿಕೊಂಡು, ಅಲ್ಲಿದ್ದ ಛತ್ರಕ್ಕೆ ಹೋಗುವಾಗ ಆಗಲೇ ಮಳೆ ಸುರಿದಿದ್ದ ಪ್ರಯುಕ್ತ, ದಾರಿಯಲ್ಲಿ ಕಾಲುಜಾರಿ ಒಂದು ಹಳ್ಳದೊಳಕ್ಕೆ ಬಿದ್ದನು. ಹಳ್ಳದಲ್ಲಿ ಬಿದ್ದ ಕಳಿಂಗ ಗಂಗನು ದೀರ್ಘವಾದ ನಿಟ್ಟುಸಿರನ್ನು ಬಿಟ್ಟು "ಅಯ್ಯೋ ಭಗವಂತ, ಅಂತಹ ರಾಜ್ಯ ವನ್ನಾಳಿದ ಸಾರ್ವಭೌಮನಿಗೆ ನೋಡುವ ರಾರೂ ದಿಕ್ಕಿಲ್ಲವಾಯಿತೇ?" ಎಂದು ನಿರಾಶೆ ಯಿಂದ ಗಟ್ಟಿಯಾಗಿ ನುಡಿದು, ಹಳ್ಳದಿಂದ ಮೆಲ್ಲನೆ ಹೊರಗೆ ಬಂದನು.

ಆಗ ದಾರಿಯಲ್ಲಿ ಹೋಗುತ್ತಿದ್ದ ವ್ಯಕ್ತಿ ಒಬ್ಬನು ಗಂಗುವನ್ನು ನೋಡಿ "ನೀನು ಯಾರಯ್ಯಾ?" ಎಂದು ಕೇಳಿದನು.

ಅದಕ್ಕೆ ಗಂಗು "ನಾನೇ? ವೇಮಲವಾಡ ಭೀಮಕವಿ ಮಾಡಿದ ಜೋಗಿ" ಎಂದು ಉದಾಸೀನನಾಗಿ ಉತ್ತರವಿತ್ತನು.

ಕೂಡಲೇ ಆತನು ಯಾರೆಂಬುದನ್ನು ಊಹಿಸಿ, "ಎಲೈ ಕಳಿಂಗಗಂಗೂ, ನೀನು ಹೇಳಿದ ವೇಮಲವಾಡ ಭೀಮಕವಿ ನಾನೇ! ಅಯ್ಯೋ ಪಾಪ, ನನ್ನ ಶಾಪದಿಂದ ನಿನಗೆ ಇಷ್ಟು ಕಷ್ಟ ಪ್ರಾಪ್ತವಾದುದಕ್ಕೆ ತುಂಬಾ ವ್ಯಥೆ ಆಗುತ್ತಿದೆ. ಹೋಗಲಿ, ಬಿಡು. ಆದು ದೇನೋ ಆಯಿತು. ನಿನ್ನನ್ನು ಕ್ಷಮಿಸಿದ್ದೇನೆ. ಮುಂದಿನ ಹುಣ್ಣಿಮೆನಂತರ ಷಷ್ಠಿಯ ದಿನ ನಿನ್ನ ರಾಜ್ಯ ನಿನಗೆ ಲಭಿಸುವುದು. ಭಯಪಡ ಬೇಡ. ಹೋಗು" ಎಂದು ಆಶೀರ್ವಾದ ಮಾಡಿ ಶಾಪವನ್ನು ಹೊರಳಿಸಿದನು.

ಭೀಮಕವಿ ವಾಕ್ಶುದ್ಧಿಯುಳ್ಳವನೆಂಬ ವಿಷಯ ಕಳಿಂಗಗಂಗನಿಗೆ ಚೆನ್ನಾಗಿ ಗೊತ್ತು. ಆದರೇನು? ಹೋದ ರಾಜ್ಯ ಮತ್ತೆ ಲಭಿಸು ವುದೆಂದರೇನು ಬಾಯಿಮಾತೇ? ರಾಜ್ಯ ಪಡೆಯಬೇಕೆಂದರೆ ಎಷ್ಟು ಸಿಬ್ಬಂದಿಯಿರ ಬೇಕು! ಎಷ್ಟು ಧನಬೇಕು? ನೋಡಿದರೆ ತಾನು ಏಕಾಕಿಯಾಗಿ ಹುಚ್ಚನಂತೆ ತಿರು ಗಾಡುತ್ತಿದ್ದಾನೆ? ಈಗೇನಿದೆ ಕೈಯಲ್ಲಿ? ಆನೆ ಗಳು, ಕುದುರೆಗಳು, ಸೈನ್ಯ, ಆಯುಧ ಏನಿದೇ? ಯಾವ ಬಲವೂ ಇಲ್ಲದೆ ಹೇಗೆ ರಾಜ್ಯ ಸಂಪಾದಿಸುವುದು? ಬರಿಗೈಯಲ್ಲಿ ಕುಳಿತಿರುವವನಿಗೆ ಜಯಹೇಗೆ ಲಭಿಸುತ್ತದೆ? ಇದು ಅಸಾಧ್ಯ! ಅಸಂಭವ! ಏನೋ ಮಾತಿ ಗಾಗಿ ನನ್ನನ್ನು ಸಮಾಧಾನ ಪಡಿಸಲು ಭೀಮ ಕವಿ ಹೀಗೆ ಆಶೀರ್ವಾದ ಮಾಡಿರಬೇಕೇ



ಹೊರತು, ನನಗೆ ಮತ್ತೆ ರಾಜ್ಯಪ್ರಾಪ್ತವಾಗುವುದೆಂದರೇನು?" ಎಂದು ಮನಸ್ಸಿನಲ್ಲಿ ಅಂದುಕೊಂಡನು.

ಈ ರೀತಿ ಯೋಚಿಸಿಕೊಂಡು ಯಥಾಪ್ರಕಾರ ಊರೂರು ಅಲೆಯುತ್ತಾ ಮುಂದಿನ ಹುಣ್ಣಿಮೆಯ ದಿವಸದ ವೇಳೆಗೆ ಸಜ್ಜನಗರದ ಸಮೀಪದಲ್ಲಿನ ಒಂದು ಗ್ರಾಮವನ್ನು ಸೇರಿದನು.

ಕಳಿಂಗಗಂಗನು ಸೇರಿದ ಆ ಗ್ರಾಮದಲ್ಲಿ ಒಂದು ಮರದ ಕೆಳಗೆ ಒಂದು ವಿಚಿತ್ರನಡೆಯುತಿತ್ತು. ಅದೇನೆಂದರೆ ನಾಟಕ ಆಡುವವರ ಗುಂಪೊಂದು ಅಲ್ಲಿ ಸೇರಿದ್ದಿತು.

"ವಹವಾ, ಎಲ್ಲಾ ಸೊಗಸಾಗಿದೆ. ಎಲ್ಲ ಸರಿಹೋದರು. ರಾಜನ ಪಾರ್ಟು ಹಾಕುವವನೊಬ್ಬನು ಸಿಕ್ಕಿಬಿಟ್ಟರೆ ನಮ್ಮ ಅದೃಷ್ಟ ಹಣ್ಣು ಆದಂತೆಯೇ ಸರಿ" ಎಂದು ಹೇಳುತ್ತಿದ್ದ ಆ ಗುಂಪಿನ ನಾಯಕ.

ಈ ಮಾತು ಕೇಳಿ ಕಳಿಂಗಗಂಗು "ಅಯ್ಯಾ ಯಾವುದಪ್ಪಾ ಆ ನಾಟಕ, ಯಾವ ರಾಜನ ವೇಷ ಹಾಕಬೇಕು?" ಎಂದು ಆತುರದಿಂದ ಪ್ರಶ್ನೆ ಮಾಡಿದನು.

ಅದಕ್ಕೆ ಆ ಮುಖಂಡನು, "ಅಯ್ಯಾ ಈಗ ಸಜ್ಜನಗರವನ್ನು ಆಳುತ್ತಿರುವ ಮಹಾರಾಜರಿಗೆ ಹಿಂದೆ ರಾಜನಾಗಿದ್ದ ಕಳಿಂಗಗಂಗನಿಗೆ ಒದಗಿದ ಸಂಕಷ್ಟಗಳನ್ನೂ, ಪರಾಭವಗಳನ್ನೂ, ನಮ್ಮ ರಾಜನಿಗೆ ಲಭಿಸಿದ ವಿಜಯವನ್ನೂ ಸೊಗಸಾಗಿ ವರ್ಣಿಸಿದ್ದಾನೆ ಒಬ್ಬ ಕವೀಶ್ವರ. ಈ ನಾಟಕವನ್ನು ರಸವತ್ತಾಗಿ ಆಡಿದರೆ ಸಾವಿರದ ನೂರ ಹದಿನಾರು ರೂಪಾಯಿಗಳನ್ನು ಕೊಟ್ಟು ಸತ್ಕರಿಸುವೆವು ಎಂದಿದ್ದಾರೆ ಮಹಾ ಪ್ರಭುಗಳು. ನಮಗೆ ಎಲ್ಲ ಪಾತ್ರಧಾರರೂ ಸಿಕ್ಕಿದ್ದಾರೆ. ಆದರೆ ರಾಜನ ವೇಷಕ್ಕೆ ಸರಿಹೋಗುವ ನಟನು ಮಾತ್ರ ಸಿಕ್ಕಲಿಲ್ಲ. ಆದರಿಂದಾಗಿ ಕೈಗೆ ಬಂದ ತುತ್ತು ಬಾಯಿಗೆ ಬರದೇ ಹೋಗುವುದಲ್ಲಾ ಎಂದು ಚಿಂತಿಸುತ್ತಿದ್ದೇವೆ" ಎಂದನು.

ಆಗ ಕಳಿಂಗಗಂಗನು "ನೀವೇನೂ ಚಿಂತಿಪಡಬೇಕಾಗಿಲ್ಲ. ನನಗೆ ಹಾಡುವುದೂ ಪಾತ್ರಧರಿಸುವುದೂ ಸೊಗುಸಾಗಿ ಬರುತ್ತದೆ. ಆದ್ದರಿಂದ ನಾನೇ ರಾಜನ ವೇಷವಹಿಸುವೆನು. ಕೇವಲ ವಿನೋದಕ್ಕಾಗಿ ನಾನು ವೇಷಧರಿಸುವೆನೇ ಹೊರತು ಹಣದಾಶೆಗಾಗಿ ಅಲ್ಲ. ನೀವು

ನನಗೆ ಒಂದು ಬಿಡಿ ಕಾಸೂ ಕೊಡಬೇಕಾಗಿಲ್ಲ. ಮಹಾರಾಜರು ಕೊಡುವ ಬಹುಮಾನಗಳ ನ್ನೆಲ್ಲಾ ನೀವೇ ತೆಗೆದುಕೊಳ್ಳಿ" ಎಂದು ಹೇಳಿದನು. ಈ ಮಾತು ಕೇಳಿ ಆ ಗುಂಪಿನ ನಾಯಕನಿಗೆ ಅಪರಿಮಿತಾನಂದವಾಯಿತು. ಅನಿರೀಕ್ಷಿತವಾಗಿ ರಾಜನ ಪಾತ್ರ ವಹಿಸುವ ವನೂ ಸಿಕ್ಕಿದುದು ಮಾತ್ರವೇ ಅಲ್ಲದೆ ಆತನು ದ್ರವ್ಯಾಪೇಕ್ಷೆಯಿಲ್ಲದವನಾದುದರಿಂದ, ತಾವು ತುಂಬಾ ಅದೃಷ್ಟಶಾಲಿಗಳೆಂದು ಕೊಂಡರು.

"ಆದರೆ ನನ್ನದೊಂದು ನಿಯಮವಿದೆ. ರಾಜನು ಹತ್ತುವ ಕುದುರೆ, ರಾಜನು ಹಿಡಿಯುವ ಖಡ್ಗ ಬೇಕು ನನಗೆ. ಇವುಗಳಿದ್ದ ಹೊರತು ನಾಟಕಕ್ಕೆ ಕಳೆಕಟ್ಟುವುದಿಲ್ಲ. ಅವುಗಳಿದ್ದರೆ ಮಾತ್ರ ನಾನು ವೇಷ ಹಾಕುವೆನು" ಎಂದ ಕಳಿಂಗಗಂಗು.

ಅದಕ್ಕೆ ಆ ಪಂಗಡದ ನಾಯಕನು "ಆ ವಿಷಯ ನಮಗೆ ಗೊತ್ತಿಲ್ಲವೇ? ಅವುಗಳನ್ನು ತಂದು ಸಿದ್ಧವಾಗಿರಿಸಿದ್ದೇವೆ." ಎಂದು ಕೂಡಲೇ ಉತ್ತರವಿತ್ತನು. ಆಗ ಕಳಿಂಗಗಂಗನು ನಾಯಕನ ಹತ್ತಿರದಿಂದ ರಾಜನ ಪಾತ್ರಧಾರಿ ಹೇಳಬೇಕಾದ ಸಂಭಾಷಣೆ, ಪದ್ಯಗಳನ್ನು ಬರೆದು ಕೊಂಡು ಹೋಗಿ ಮರುದಿನವೇ ಒಪ್ಪಿಸಿಬಿಟ್ಟನು. ಹಣದ ವ್ಯಯ ಇಲ್ಲದೆ ಇಂತಹ ಬುದ್ಧಿವಂತನಾದ ನಟನು ಸಿಕ್ಕಿದುದಕ್ಕೆ ನಾಯಕನು ಸಂತೋಷಗೊಂಡನು.



ಪಂಚಮಿಯ ದಿನ ನಾಟಕ ಪ್ರದರ್ಶಿಸುವ ಏರ್ಪಾಟು ನಡೆಯಿತು. ರಾಜನಕೋಟೆಯಲ್ಲಿ ಆಕಾಶದಷ್ಟು ಅಗಲವಾದ ಚಪ್ಪರಹಾಕಿಸಿದರು. ಸಾವಿರಾರು ಪಂಜುಗಳನ್ನು ಉರಿಸಿದರು. ಬೆಳ್ಳಿಯ ಹಿಡಿಯುಳ್ಳ ಬೀಸಣಿಗೆಗಳನ್ನು ಹಿಡಿದುಕೊಂಡು ಎರಡುಕಡೆಯೂ ಇಬ್ಬರು ಸ್ತ್ರೀಯರು ಬೀಸುತ್ತಿರುವಾಗ, ಮಹಾರಾಜನು ಭಾರಿ ಸಿಂಹಾಸನದ ಮೇಲೆ ಕುಳಿತುಕೊಂಡು ತಾಂಬೂಲ ಮೆಲ್ಲುತ್ತಾ ಸಂತೋಷದಿಂದ ನಾಟಕ ನೋಡುತ್ತಿದ್ದನು.

ನಾಟಕ ಪ್ರಾರಂಭವಾಯಿತು. ಕಥೆಯ ಬಹುಭಾಗ ಮುಗಿಯಿತು. ಮತ್ತೆ ಸ್ವಲ್ಪ ಹೊತ್ತಿಗೆಲ್ಲಾ ಖಡ್ಗವನ್ನು ಕೈಯಲ್ಲಿ ಧರಿಸಿ ರಾಜನ ಪಾತ್ರಧಾರಿಯು ಕುದುರೆ ಹತ್ತಿ ರಂಗದ ಮೇಲೆ ಟಕಟಕನೆಂದು ಬಂದನು. "ಇದೇನು

ನಾಟಕವೋ, ಇಲ್ಲ ನಿಜವಾಗಿ ಕಳಿಂಗಗಂಗನೇ ಮತ್ತೆ ಬಂದನೋ" ಎಂದು ಸಭೆಯಲ್ಲಿದ್ದವರೆಲ್ಲ ಆಶ್ಚರ್ಯ ಪಟ್ಟರು. ಅಸಲು ಕಳಿಂಗಗಂಗನಿರುವಂತೆಯೇ ಇದ್ದ ವ್ಯಕ್ತಿಯನ್ನು ಕಂಡು ರಾಜನೂ ಸಹ ಮೊದಲು ಕಂಗಾರು ಬಿದ್ದನು. ಆದರೆ ಸ್ವಲ್ಪನೆಮ್ಮದಿ ತಂದುಕೊಂಡು ಅದು ವೇಷವೇ ಹೊರತು ಅಸಲು ಕಳಿಂಗಗಂಗನಾಗಿರಲಾನೆಂದು ನಿಶ್ಚಯಿಸಿಕೊಂಡು ನಿಶ್ಚಿಂತೆಯಾಗಿ ಕಾಲುಮೇಲೆ ಕಾಲು ಹಾಕಿಕೊಂಡು ನಾಟಕ ನೋಡಲಾರಂಭಿಸಿದನು.

ತುಸಹೊತ್ತು ತನ್ನ ಪಾತ್ರದ ಮಾತುಗಳನ್ನೆಲ್ಲಾ ಸ್ವಾರಸ್ಯವಾಗಿ ಹೇಳಿದ ಕಳಿಂಗಗಂಗು. ಕೊನೆಗೆ ಯುದ್ಧ ಘಟ್ಟ ಬರುವವೇಳೆಗೆ ಆತನಲ್ಲಿ ತೀವ್ರವಾದ ಪೌರುಷ ಮತ್ತು ರೋಷವುಂಟಾಯಿತು. ಒಂದು ಸಾರಿ ಸರಕ್ಕನೆ ಕುದುರೆಯ ಮೇಲಿಂದ ಧುಮಿಕಿ ನಿಶ್ಚಿಂತೆಯಾಗಿ ನಾಟಕ ನೋಡುತ್ತಿದ್ದ ಶತ್ರು ರಾಜನ ಮೇಲೆ ಬಿದ್ದು ಕೈಯಲ್ಲಿದ್ದ ಖಡ್ಗದಿಂದ ಆತನ ತಲೆಯನ್ನು ಒಂದೇ ಏಟಿಗೆ ಕತ್ತರಿಸಿ, ಆತನನ್ನು ಸಿಂಹಾಸನದಿಂದ ಕೆಳಗೆ ತಳ್ಳಿ ತಾನು ಸಿಂಹಾಸನವನ್ನೇರಿ ಕುಳಿತನು.

ಇಷ್ಟರಲ್ಲಿ ಪ್ರಜೆಗಳೆಲ್ಲರೂ ತಮ್ಮ ರಾಜನ ಗುರುತು ಕಂಡು ಹಿಡಿದು ಕಾಲಿಗೆಬಿದ್ದು ಶರಣು ಮಾಡಿದರು. ರಾಜ ಭಟರು ದಿಗ್ಮೂಢರಾಗಿ ನಿಂತು ಬಿಟ್ಟರು. ಇಷ್ಟು ಕಾಲ ನಾನಾ ಕಷ್ಟಗಳನ್ನು ಅನುಭವಿಸಿ, ಈರೀತಿ ಮತ್ತೆ ತನ್ನ ರಾಜ್ಯಕ್ಕೆ ಬಂದುದನ್ನು ಕಂಡು ಎಲ್ಲರೂ ಸಂತೋಷಗೊಂಡರು. ಪ್ರಜೆಗಳೆಲ್ಲರೂ ಒಂದಾದರೆ ಶತ್ರು ರಾಜನ ಪರಿವಾರ ಮಾತ್ರ ಏನು ಮಾಡ ಬಲ್ಲದು? ಶತ್ರು ರಾಜನ ಆಪ್ತರನ್ನೂ ಆತನ ಸೈನ್ಯವನ್ನೂ ನಿಮಿಷ ಮಾತ್ರದಲ್ಲಿ ಓಡಿಸಿ, ಮಾರನೇ ದಿನವೇ ಅಂದರೆ ಷಷ್ಠಿಯ ದಿನ ಕಳಿಂಗಗಂಗು ಮಹಾರಾಜನಿಗೆ ಸಜ್ಜನಗರದ ಪ್ರಜೆಗಳು ಮತ್ತೆ ಪಟ್ಟ ಕಟ್ಟಿದರು. ಕಳಿಂಗಗಂಗು ಆಗ ಮತ್ತೆ ಒಂದು ಸಾರಿ ಭೀಮಕವಿಯ ವಾಕ್ಯುದ್ಧಿಯಲ್ಲಿರುವ ಮಹತ್ತನ್ನು ತಿಳಿದು ಮೆಚ್ಚಿಕೊಂಡನು.

ಅಂದಿನಿಂದ ಕಳಿಂಗಗಂಗನಿಗೆ ಕವಿ ಶ್ರೇಷ್ಠರೆಂದರೆ ತುಂಬಾ ಗೌರವವೇರ್ಪಟ್ಟಿತು. ತನ್ನ ಆಸ್ಥಾನಕ್ಕೆ ಕವಿ ಎಂಬುವನೊಬ್ಬನು ಬಂದನೆಂದರೆ ಆತನನ್ನು ಅಮಿತ ಮರ್ಯಾದೆಗಳಿಂದ ಆದರಿಸಿ ಸತ್ಕಾರ ಮಾಡುತ್ತಿದ್ದನು.





ವೇಳಂಗಿಪುರದಲ್ಲಿ ವೆಂಕಟಪ್ಪ ಅಂತ ಒಬ್ಬ ಬಡ ಹುಡುಗನೊಬ್ಬನಿದ್ದನು. ಅವನಿಗೆ ತಂದೆ ತಾಯಿಗಳಿರಲಿಲ್ಲ. ಮನೆಮಠ, ದುಡ್ಡು ದುಗ್ಗಾಣಿ ಏನೂ ಇಲ್ಲ. ಆವತ್ತಿಗಾವತ್ತು ಯಾರಾದರೊಬ್ಬರ ಮನೆಗೆ ಹೋಗಿ 'ಅಮ್ಮಾ ಬಡವ. ಸ್ವಲ್ಪ ಅನ್ನವಿಟ್ಟು ಪುಣ್ಯ ಕಟ್ಟಿ ಕೊಳ್ಳೀಮ್ಮಾ' ಎಂದು ಕೇಳುತ್ತಿದ್ದ. ದಿಕ್ಕಿಲ್ಲ ದವನೆಂದು ಮರುಕಗೊಂಡು ಅವರು ಅನ್ನ ಹಾಕುತ್ತಿದ್ದರು.

ಊರಿನವರ ದಯೆಯಿಂದ ವೆಂಕಟಪ್ಪನಿಗೆ ಮೊದಮೊದಲು ದಿನಗಳು ಸುಖವಾಗಿಯೇ ಸಾಗಹತ್ತಿದವು. ಆದರೆ ಸದಾ ಕಾಲ ಒಂದೇ ರೀತಿಯಿರುವುದೇ? ದೇಶದಲ್ಲಿ ದುರ್ಭಿಕ್ಷಬಂದು, ಎಲ್ಲ ಊರುಗಳಂತೆಯೇ ವೇಳಂಗಿಪುರದಲ್ಲಿಯೂ ರೇಷನಿಂಗ್ ಜಾರಿಗೆ ಬಂತು. ಅದರಿಂದಾಗಿ ಕೊಡಲು ಶಕ್ತಿಯಿರುವವರೂ ಇಲ್ಲದವರೂ ಸಹ ಬಿಕ್ಷೆ ಬೇಡಿತಿನ್ನುವ ಬಡವರಿಗೆ ಇಲ್ಲವೆಂದು ಕೈ ಆಡಿಸಲು ಪ್ರಾರಂಭಿಸಿದರು. ಇದರಿಂದ ವೆಂಕಟಪ್ಪನಿಗೆ ತುಂಬಾ ಕಷ್ಟವಾಯಿತು.

ಆದರೆ ವೆಂಕಟಪ್ಪ ಜೀವನೋಪಾಯ ತಿಳಿದ ಹುಡುಗ. ಆದ್ದರಿಂದ ಇಂತಹ ದುರ್ಭಿಕ್ಷಕಾಲದಲ್ಲೂ ಸಹ ತನ್ನ ಬುದ್ಧಿ ವಿನಿಯೋಗಿಸಿ, ಯಾವುದೋ ಒಂದು ರೀತಿ ಎಲ್ಲೋ ಒಂದು ಕಡೆಯಲ್ಲಿ ಹೊಟ್ಟೆಹೊರೆದುಕೊಳ್ಳುತ್ತಲೇ ಇದ್ದ. ಒಂದು ದಿನ ಮಟ್ಟೆಗೆ ಏನೂ ಸಿಗದೆ ಕೈ ಬರಿದಾಯಿತು. ಸಾಯಂಕಾಲ ಆಗುತ್ತಿದೆ, 'ಈ ರಾತ್ರಿ ಉಪವಾಸವೇ ಅಂತ ಕಾಣುತ್ತದೆ' ಎಂದು ಅಂದುಕೊಳ್ಳುತ್ತಾ ಒಂದು ಬೀದಿಯಲ್ಲಿ ನಡೆಯುತ್ತಿದ್ದ.

ಹಾಗೆ ಹೋಗುತ್ತಿದ್ದಾಗ ರಸ್ತೆಯ ಮೇಲೆ ಮಧ್ಯದಲ್ಲಿ ಒಂದು ಕಾಗದದ ಚೂರು ಅವನಿಗೆ ಕಾಣಿಸಿತು. ದೂರದಲ್ಲಿದ್ದ ಮುನಿಸಿಪಲ್ ಲಾಂದ್ರದ ಬೆಳಕಿನಿಂದ ಆ ಕಾಗದವು ಒಂದು ಐದು ರೂಪಾಯಿಯ ನೋಟಿನಂತೆ ಕಾಣಿಸಲು, ಅವನು ಆಶೆಯಿಂದ ಅದನ್ನು ತೆಗೆದುಕೊಂಡು ನೋಡಿದ. ನೋಡಿದರೆ ಏನಿದೆ? ಅದು ಏನೋ ಬರೆದಿದ್ದ ಸಾಧಾರಣ ಕಾಗದದ ಚೂರು.! ನನ್ನ ಭಾಗ್ಯಕ್ಕೆ ರೂಪಾಯಿ ನೋಟು ಸಿಕ್ಕಬೇಕೆ? ಎಂದುಕೊಂಡು

ತಮಿಳು ಕಥೆಯಿಂದ.




ಬಿಸಾಡೋಣವೆಂದು ಯೋಚಿಸುತ್ತಿರುವಲ್ಲಿ, ಆ ದಾರಿಯಲ್ಲಿ ಬರುತ್ತಿದ್ದ ಒಬ್ಬಾತ "ಏನೋ ಹೈದಾ, ಅದು" ಎಂದು ಕೇಳಿದ.

"ಏನೋ ಬರೆದಿದೆ. ಓದಿ ಸ್ವಾಮಿ ಸ್ವಲ್ಪ" ಎಂದು ವೆಂಕಪ್ಪ ಅದನ್ನು ಆತನಿಗೆಕೊಟ್ಟ.

ಆತನು ಓದಿ "ಯಾರೋ ಡಾಕ್ಟರು ಕೊಟ್ಟ ಚೀಟಿ. ಅಜೀರ್ಣಕ್ಕೆ ಔಷಧ. ಊಟ ಮಾಡಿದಕೂಡಲೇ ತೆಗೆದುಕೊಳ್ಳಬೇಕಂತೆ" ಎಂದು ಕಾಗದವನ್ನು ಮತ್ತೆ ವೆಂಕಟಪ್ಪನಿಗೆ ವಾಪಸುಕೊಟ್ಟು ಹೊರಟುಹೋದ.

"ನನ್ನಂತಹವರು ತಿಂಡಿಯಿಲ್ಲದೆ ಬಾಧೆ ಪಡುತ್ತಿದ್ದರೆ, ಈ ಚೀಟಿ ಕಳೆದುಕೊಂಡವನು ಯಾರೋ ಹೆಚ್ಚಾಗಿ ಅಜೀರ್ಣದಿಂದ ಬಾಧೆ ಪಡುತ್ತಿರುವಂತಿದೆ. ಪ್ರಪಂಚವೇ ಹೀಗೆಂದು ತೋರುತ್ತೆ." ಎಂದು ವೆಂಕಪ್ಪ ಮುಂದೆ ನಡೆದ.

ಮತ್ತೆರಡು ಹೆಜ್ಜೆ ಹಾಕಲು ಬಂಗಾರಮ್ಮನವರ ಮನೆಯ ಹೊಸ್ತಿಲ ಹತ್ತಿರಕ್ಕೆ ಬಂದ. ಆಕೆ ಆಗಲೇ ಊಟ ಮುಗಿಸಿ, ಎಲೆ ಬಿಸಾಡಲು ಬೀದಿಗೆ ಬಂದಿದ್ದಳು. ಆಕೆಯ ಮುಖ ಕಂಡು ವೆಂಕಟಪ್ಪನಿಗೆ 'ಈಕೆ ತುಂಬಾ ಮೃದು ಹೃದಯದವಳು, ಏನಾದರೂ ಉಪಾಯ ಹೂಡಿ ಈಕೆಯ ಮನಸ್ಸು ಕರಗುವಂತೆ ಮಾಡಿದರೆ ಉಳಿದಿರುವುದನ್ನು ನನಗಿಡದೆ ಇರಲಾರಳು' ಎಂದು ಅನ್ನಿಸಿತು. ಈ ಉದ್ದೇಶದಿಂದ ಅವನು ಆಕೆ ನೋಡುವಂತೆ ಕೈಯಲ್ಲಿದ್ದ ಕಾಗದವನ್ನು ಪರಿಶೀಲಿಸುತ್ತಾ ನಿಂತ. ಇದನ್ನು ನೋಡಿ ಬಂಗಾರಮ್ಮ "ಏನೋ ಹುಡುಗಾ ಅದು" ಎಂದು ಕೇಳಿದಳು.

"ಡಾಕ್ಟರು ಕೊಟ್ಟ ಚೀಟಿ ತಾಯಿ. ಮೈಸ್ವಸ್ಥವಿಲ್ಲದಿರಲು ಹೋಗಿ ಕೇಳಿದರೆ ಬರೆದುಕೊಟ್ಟರು. ಅಷ್ಟೇ ಅಲ್ಲ, ಬಡವಕಣೋ ನೀನು, ಔಷಧಿಕೊಳ್ಳಲು ಹಣವೆಲ್ಲಿರುತ್ತದೆ? ಎಂದು ಹೇಳಿ ಪಾಪ, ಔಷಧಿಯನ್ನು ಸಹ ಬಿಟ್ಟೀಕೊಟ್ಟರು. ಔಷಧಿ ಏನೋಕೊಟ್ಟರು. ಅನುಪಾನ ಸಹ ಹೇಗೆ ಕೊಡುತ್ತಾರೆ ಹೇಳಿ? ಬಾಯಿಬಿಟ್ಟು ಕೇಳಿದ್ದರೆ ಅದನ್ನೂ ಕೊಡುತ್ತಿದ್ದರು. ಅಷ್ಟು ಒಳ್ಳೆಯವರು. ಆದರೆ ನಾನೇ ದಾಕ್ಷಿಣ್ಯಕ್ಕೆ ಬಿದ್ದೆ. ಬಿಕ್ಕೆಬೇಡುವವನಿಗೆ ದಾಕ್ಷಿಣ್ಯವೇನು ಬಂತು ಹೇಳಿ? ಕೇಳಿಬಿಟ್ಟಿದ್ದರೆ ಚೆನ್ನಾಗಿರುತಿತ್ತು ಅಂತ ಈಗ ಅಂದುಕೊಳ್ಳುತ್ತಿದ್ದೇನೆ" ಎಂದ.

ಕ್ಷಣದಲ್ಲಿ ವೆಂಕಟಪ್ಪ ಈ ಕಥೆಕಲ್ಪಿಸಿದ. ಆ ಡಾಕ್ಟರು ಯಾರೋ, ಅವನು ತಾನು ಹೇಳಿದಷ್ಟು ಒಳ್ಳೆಯವನೋ, ಅಲ್ಲವೋ ಅವನಿಗೇ ತಿಳಿಯದು.

"ಅನುಪಾನತಾನೇ, ನಾನುಕೊಡುತ್ತೇನೆ ಬಿಡು. ಏನು ಅನುಪಾನ, ಹೇಗೆ ತೆಗೆದು ಕೊಳ್ಳಬೇಕಂತೆ, ಜೇನುತುಪ್ಪದೊಂದಿಗೇನು? ಇಲ್ಲ ಜೀರಿಗೆ ರಸವೋ, ಇಲ್ಲ ಮೆಣಸಿನ ಕಷಾಯದೊಂದಿಗೋ? ಹೇಗೆ?" ಎಂದು ಕೇಳಿದಳು ಬಂಗಾರಮ್ಮ.

ಕೂಡಲೇ ವೆಂಕಟಪ್ಪ ಆ ಕಾಗದವನ್ನು ಆಕೆಯ ಕೈಗೆ ಕೊಟ್ಟು "ಅಮ್ಮಾ ಓದು ಬಾರದವನು. ನೀವೇ ನೋಡಿ" ಎಂದ.

ಆಕೆ ಚೀಟಿ ಓದಿ "ಈ ಔಷಧ ಊಟ ಮಾಡಿದ ತರುವಾಯ ತೆಗೆದು ಕೊಳ್ಳುವಂತೆ ಬರೆದಿದೆ. ಅನುಪಾನವೇನೂ ಬರೆದಿಲ್ಲವಲ್ಲಾ!' ಎಂದಳು.

ಅದಕ್ಕೆ ವೆಂಕಟಪ್ಪ, "ಅದೇ ತಾಯಿ, ಆ ಊಟವೇ ತಾಯಿ ಅನುಪಾನ. ಅದಕ್ಕಾಗಿ ಬೆಳಗಿನಿಂದ ತಿರುಗಾಡುತ್ತಿದ್ದೇನೆ." ಎಂದ.

ನಿರ್ಘಾಂತಳಾದಳು ಆ ಗೃಹಿಣಿ. ಮತ್ತೊಬ್ಬಾಕೆ ಆಗಿದ್ದರೆ 'ಇದೋನಿನ್ನ ಮಸಲತ್ತು?' ಎಂದು ಧಡಾರನೆ ಬಾಗಿಲು ಹಾಕಿಕೊಂಡು ಹೋಗುತ್ತಿದ್ದಳು. ಆದರೆ ಬಂಗಾರಮ್ಮ ಮಾತು ಮೀರದ ಮಹಿಳೆ. ಯಾವ ಅನುಪಾನವಾದರೂ ಕೊಡುವೆನೆಂದು ಒಪ್ಪಿಕೊಂಡಳಾದ್ದರಿಂದ ಅವನಿಗೆ ಆ ಹೊತ್ತು



ಊಟವಿಡಲು ನಿಶ್ಚಯಿಸಿ, ಒಳಗೆ ಕರೆದು ಹೊಟ್ಟೆ ತುಂಬಾ ಊಟವಿಟ್ಟಳು.

ಅವನು ಇನ್ನು ತನ್ನ ದಾರಿಹಿಡಿಯುವನೆಂದು ನೆನೆಸಿದ್ದಳು ಬಂಗಾರಮ್ಮ. ಅವನು ಆ ರೀತಿ ಮಾಡದೆ "ಚಿಕ್ಕಮ್ಮಾ, ಒಂದು ಕ್ಷಣ ಪಡಸಾಲೆಯಲ್ಲಿ ಮಲಗಿ ಆ ಮೇಲೆ ಹೋಗುತ್ತೇನೆ" ಎಂದು ತನ್ನ ಹತ್ತಿರವಿದ್ದ ಬಟ್ಟೆ ಹಾಸಿದ ನೆಲದಮೇಲೆ. "ಸರಿ, ಔಷಧಿ ತೆಗೆದುಕೊಳ್ಳುವುದು ಮರೆತು ಬಿಟ್ಟೆಯಲ್ಲೋ ವೆಂಕಪ್ಪ" ಎಂದಳಾಕೆ.

ವೆಂಕಟಪ್ಪ ನಗುತ್ತಾ "ನನ್ನ ರೋಗ ಹಸಿವಿನರೋಗ ತಾಯಿ, ಆ ರೋಗಕ್ಕೆ ತಕ್ಕ ಔಷಧಿ ಅನುಪಾನ ನೀವು ಇಟ್ಟ ಊಟ. ಮಹಾತಾಯಿ ನೀವು" ಎಂದು ಹೇಳಿ ತನ್ನ ದಾರಿ ತಾನು ಹಿಡಿದ.



# ತೀರದ ಬಯಕೆ



ಕಾಶೀಪಟ್ಟಣದಲ್ಲಿ ತಿಲೋತ್ತಮೆಯೆಂಬ ಹದಿನೆಂಟು ವರ್ಷದ ಒಬ್ಬ ಯುವತಿ ಯಿದ್ದಳು. ಆ ವಯಸ್ಸಿನಲ್ಲೇ ಆಕೆ ದೊಡ್ಡ ಸಂಗೀತ ವಿದ್ವಾಂಸಳೆಂಬ ಕೀರ್ತಿ ಪಡೆದಳು. ಆಕೆಯ ಪ್ರಖ್ಯಾತಿಯನ್ನು ಕೇಳಿ ಮಹಾ ರಾಜರು ಆಕೆಯನ್ನು ಬರಮಾಡಿಕೊಂಡು ತಮ್ಮ ಮಗಳಾದ ಚಂದ್ರರೇಖೆಗೆ ಸಂಗೀತ ಹೇಳಿಕೊಡಲು ನಿಯಮಿಸಿದರು. ತಿಲೋತ್ತಮ ಮತ್ತು ಚಂದ್ರರೇಖೆಯರಿಬ್ಬರು ಸಮ ವಯಸ್ಕರು. ಅದರಿಂದ ಅವರಿಬ್ಬರಲ್ಲಿ ಸ್ನೇಹ ಬೆಳೆದು ಕಲೆತು ಮೆಲೆತು ತಿರುಗಾಡುತ್ತಿದ್ದರು.

ಸ್ವಲ್ಪಕಾಲದ ಮೇಲೆ ಮಹಾರಾಜರು ತಮ್ಮ ಮಗಳು ಎಷ್ಟು ಕಲಿತಿರುವಳೋ ತಿಳಿಯಬೇಕೆಂಬ ಅಭಿಲಾಷೆಯಿಂದ ಅಂತಃ ಪುರಕ್ಕೆ ಬಂದರು. ಆತನೊಂದಿಗೆ ರಾಣಿಯ ತಮ್ಮನೂ ಚಂದ್ರರೇಖೆಯ ಸೋದರ ಮಾವನೂ ಆದ ವೀರಸೇನನೂ ಸಹ ಬಂದ. ಚಂದ್ರರೇಖೆ ತಾನು ತಿಲೋತ್ತಮೆಯಿಂದ ಕಲಿತುಕೊಂಡ ಕೆಲವು-ಹಾಡುಗಳನ್ನು ಹಾಡಿ, ತನ್ನ ವಿದ್ಯಾಪ್ರವೀಣ್ಯತೆ ತೋರಿಸಿದಳು. ಮಗಳ ಪಾಂಡಿತ್ಯಕ್ಕೆ ರಾಜ ಮೆಚ್ಚಿಕೊಂಡನು. ವೀರಸೇನನೂ ಸಹ ಮೆಚ್ಚದಿರಲಿಲ್ಲ. ಆದರೆ ಆತನಲ್ಲಿ ತಿಲೋತ್ತಮೆಯನ್ನು ನೋಡಿದಾಗ ಲಿಂದ ಆಕೆಯನ್ನು ವಿವಾಹವಾಗುವ ಅಭಿ ಲಾಷೆ ಜನಿಸಿತು.

ಒಂದು ದಿನ ತಿಲೋತ್ತಮೆ ಏಕಾಕಿನಿ ಯಾಗಿರುವ ಸಮಯ ನೋಡಿ ವೀರಸೇನನು "ತಿಲೋತ್ತಮಾ, ನನ್ನನ್ನು ಮದುವೆಯಾಗು. ನೀನು ಕೋರಿದ ನಗನಾಣ್ಯಗಳನ್ನು ಮಾಡಿ ಸಿಡುವೆನು" ಎಂದ. ರಾಣಿಯವರ ತಮ್ಮ ನೆಂಬ ಮಾತೇ ಹೊರತು, ರೂಪದಲ್ಲಿ ವೀರ ಸೇನ ಬಹಳ ಅಸಹ್ಯವಾಗಿದ್ದ. ಅಂತಹವ ನನ್ನು ವಿವಾಹವಾಗಲು ತಿಲೋತ್ತಮ ಒಪ್ಪ ಲಿಲ್ಲ. ಆದರೆ ವೀರಸೇನನು ಆಗ ಹೋದರೂ ತನ್ನ ಪ್ರಯತ್ನವನ್ನೂ ಬಿಡಲಿಲ್ಲ. ಒಂದಾ ನೊಂದು ಅರಣ್ಯಕ್ಕೆ ಹೋಗಿ ಅಲ್ಲಿ ಒಬ್ಬ ಮಾಟಗಾತಿಯನ್ನು ಆಶ್ರಯಿಸಿದ. ಅವಳು ಹತ್ತು ವರಹಗಳನ್ನು ಪಡೆದು ಯಾವುದೋ ಒಂದಿಷ್ಟು ಕಪ್ಪು ಭಸ್ಮವನ್ನು ಸೀಸೆಯಲ್ಲಿ ಹಾಕಿ ಕೊಟ್ಟು "ಎಲೆ, ದೊರೆಯೇ, ಈ ಪುಡಿ

ಪಿ. ವಿ. ರಾಮಚಂದ್ರಮೂರ್ತಿ, ಮದರಾಸು.

ಯನ್ನು ಎಣ್ಣೆಯಲ್ಲಿ ಕಲೆಸಿ, ಆ ಹುಡುಗಿಯ ತಲೆಗೆ ಬಳಿ. ಆಕೆ ತನ್ನಷ್ಟಕ್ಕೆ ತಾನೇ ಬಂದು ಹೂಮಾಲೆ ಹಾಕಿ ಮದುವೆಯಾಗುವಳು" ಎಂದು ಹೇಳಿದಳು.

ಮಾಟಗಾತಿಯ ಮಾತಿನಂತೆ ವೀರಸೇನನು ಒಂದು ಅಮಾವಾಸ್ಯೆ ರಾತ್ರಿ ತಿಲೋತ್ತಮೆ ಮಲಗಿದ್ದ ಕೋಣೆಯನ್ನು ಪ್ರವೇಶಿಸಿದ. ಈ ಔಷಧಿ ತಲೆಗೆ ತಗುಲಿದ ತಕ್ಷಣ ಆಕೆಗೆ ತನ್ನ ಮೇಲೆ ಪ್ರೇಮ ಜನಿಸುವುದೆಂದೂ, ಆದ್ದರಿಂದ ಆಕೆಗೆ ಎಚ್ಚರವಾದರೂ ಪ್ರಮಾದವೇನಿರಲಾರದೆಂಬ ನಂಬಿಕೆಯಿಂದ ಆ ಶತಮೂರ್ಖ ಆಕೆಯ ತಲೆಗೆ ತೈಲ ಹಚ್ಚ ತೊಡಗಿದ.



ಆಕೆ ಕೂಡಲೇ ಎಚ್ಚರಹೊಂದಿ "ಕಳ್ಳ ಕಳ್ಳ" ಎಂದು ಕಿರಿಚಲು, ಪಕ್ಕದ ಕೋಣೆಯಲ್ಲೇ ಮಲಗಿದ್ದ ಚಂದ್ರರೇಖೆಗೂ ಸಹ ಎಚ್ಚರವಾಯಿತು. ಆಕೆಯೂಸಹ "ಕಳ್ಳ ಕಳ್ಳ" ಎಂದು ಅರಚಾಡಲು, ವೀರಸೇನನು ಓಡೋಡಿ, ಹೇಗೋ ತನ್ನ ಅರಮನೆ ಸೇರಿಕೊಂಡ. ಇಷ್ಟೊಂದು ಅವಾಂತರ ನಡೆದರೂ ವೀರಸೇನನಿಗೆ ತಿಲೋತ್ತಮೆಯಲ್ಲಿನ ಮೋಹ ಹೋಗಲಿಲ್ಲ. ತಾನು ಚೆನ್ನಾಗಿ ಹಚ್ಚಿದ ಆ ತೈಲ ತಿಲೋತ್ತಮೆಯಲ್ಲಿ ಕೆಲಸಮಾಡಿ, ಆಕೆ ಹೂ ಮಾಲೆ ಹಿಡಿದು ತನ್ನ ಅರಮನೆಗೆ ಬರುವಳೆಂದು ಎರಡು ಮೂರು ದಿನ ಎದುರು ನೋಡಿದ. ಆ ತರುವಾಯ ಆತನೇ ಆಕೆಯಿದ್ದ ಕೊಠಡಿಯ ಮುಂದೆ ಅಡ್ಡಾಡಿ ನೋಡಿದ. ಏನೂ ಲಾಭವಿಲ್ಲದಾಯಿತು. ಆಗ ತಿಳಿಯಿತು ಆತನಿಗೆ, ಆ ಬೇಡಿತಿ ಮೋಸ ಮಾಡಿರಬಹುದೆಂದು! ತರುವಾಯ ವೀರಸೇನನು ಕೆಲ ಜನ ಕಳ್ಳರನ್ನು ನೇಮಿಸಿ ತಿಲೋತ್ತಮೆಯನ್ನು ರಹಸ್ಯವಾಗಿ ಎತ್ತಿಕೊಂಡು ಬರುವಂತೆ ಏರ್ಪಾಟು ಮಾಡಿದ.

ಸ್ವಲ್ಪಕಾಲದನಂತರ ಚಂದ್ರರೇಖಾ, ತಿಲೋತ್ತಮೆಯರು ಸಖಿಯರೊಂದಿಗೆ ನಗರಕ್ಕೆ ಸಮೀಪದಲ್ಲಿದ್ದ ಉದ್ಯಾನವನದಲ್ಲಿ ಕೆಲವು ದಿನ ಉಲ್ಲಾಸವಾಗಿದ್ದು ಕಾಲ ಕಳೆದು ಬರಬೇಕೆಂದು ಹೊರಟರು. ತಿಲೋತ್ತಮೆಯ ಚಲನವಲನೆಗಳನ್ನು ವೀರಸೇನನು ನಿಯಮಿಸಿದ ಕಳ್ಳರು ಹೊಂಚು ಹಾಕಿ ನೋಡುತ್ತಲೇ ಇದ್ದರು.

ಅವರು ಅಂದು ಸಂಜೆ ಉದ್ಯಾನವನದಲ್ಲಿ ಆವಿತುಕೊಂಡು, ಅರ್ಧರಾತ್ರಿ ಎಲ್ಲರೂ ಗಾಢ



ನಿದ್ದೆಯಲ್ಲಿರುವ ಸಮಯದಲ್ಲಿ ಭವನವನ್ನು ಪ್ರವೇಶಮಾಡಿದರು. ಅಲ್ಲಿ ಎಲ್ಲರೂ ತೂಲಿಕಾ ತಲ್ಪದಲ್ಲಿ ಸುಖನಿದ್ರೆಯಲ್ಲಿದ್ದರು. ತಿಲೋತ್ತಮೆಯನ್ನು ಆಕೆ ಹಗಲು ಉಟ್ಟಿದ್ದ ಸೀರೆಯಿಂದ ಗುರುತಿಟ್ಟುಕೊಂಡಿದ್ದರಾಗಿ, ಆ ಕಳ್ಳರು ಆ ಸೀರೆಯುಟ್ಟಿದ್ದ ಯುವತಿ ಮಲಗಿದ್ದ ಮಂಚವನ್ನು ಕಂಡುಹಿಡಿದು, ಆಕೆಗೆ ಎಚ್ಚರವಾಗದಂತೆ ಆ ಮಂಚವನ್ನು ಹೊತ್ತು, ಜಾಗರೂಕತೆಯಿಂದ ತೆಗೆದುಕೊಂಡು ಹೋಗಿ, ವೀರಸೇನನ ಮುಂದಿಟ್ಟು "ನಮ್ಮ ಬಹುಮಾನ ಕೊಡಿ, ಸ್ವಾಮಿ" ಎಂದರು. "ಕೊಡ್ತೇನೆ, ಕೊಡ್ತೇನೆ" ಎಂದು ಸಂತೋಷ ತಡೆಯಲಾರದೆ ನಿದ್ರೆಯಲ್ಲಿದ್ದ ಆ ಯುವತಿಯ ಕಡೆ ಒಂದು ಸಾರಿ ನೋಡಿದ ವೀರಸೇನ. ನೋಡಿದರೆ ಆಕೆ ತಿಲೋತ್ತಮೆಯಲ್ಲ, ತನ್ನ ಸೋದರ ಸೊಸೆ ಚಂದ್ರರೇಖೆ! "ಈಕೆಯನ್ನೇಕೆ ಎತ್ತಿಕೊಂಡು ಬಂದಿರಿ, ತಿಳಿಗೇಡಿಗಳೇ? ಜಾಗರೂಕತೆಯಿಂದ ತೆಗೆದುಕೊಂಡು ಹೋಗಿ ಅಲ್ಲೇ ಬಿಟ್ಟು ಬನ್ನಿ" ಎಂದು ಅವರನ್ನು ಬಯ್ದು ಕಳುಹಿಸಿದ ವೀರಸೇನ.

ಮುಂದೇನು ಮಾಡಲೂ ತೋರದೆ ಕಳ್ಳರು ಮಂಚವನ್ನು ತಲೆಯ ಮೇಲಿಟ್ಟುಕೊಂಡು ಮತ್ತೆ ಉದ್ಯಾನದಕಡೆ ನಡೆದರು. ಅಷ್ಟರಲ್ಲಿ ಪಹರೆ ತಿರುಗಾಡುವ ರಾಜ ಭಟರು ಸುಳಿದಾಡುವ ಸದ್ದು ಕೇಳಿಸಲು, ಆ ಮಂಚದೊಂದಿಗೆ ಸಿಕ್ಕಿಬಿದ್ದರೆ ತಮ್ಮ ಪ್ರಾಣಗಳು ಉಳಿಯಲಾರವೆಂದುಕೊಂಡು, ಆ ರಾತ್ರೋರಾತ್ರಿಯೇ ಅವರು ಆ ಮಂಚದೊಂದಿಗೆ ಒಂದು ಅಡವಿಯನ್ನು ಪ್ರವೇಶಿಸಿದರು. ತಾವು ಪಟ್ಟ ಕಷ್ಟ ಏಕೆ ವ್ಯರ್ಥವಾಗಬೇಕೆಂದು ಆ ಕಳ್ಳರು ಚಂದ್ರರೇಖೆಯ ಮೈಮೇಲಿದ್ದ ಒಡವೆಗಳನ್ನು ಕಳಚಿಕೊಂಡು, ಆಕೆಯನ್ನು ಆ ಅರಣ್ಯದಲ್ಲಿ ಒಂಟಿಯಾಗಿ ಬಿಟ್ಟು ತಮ್ಮ ದಾರಿ ತಾವು ಹಿಡಿದರು.

ಬೆಳಗಾಗುವ ವೇಳೆಗೆ ರಾಜಕುಮಾರಿ ಕಾಣಿಸಲಿಲ್ಲವೆಂಬ ವಿಷಯ ನಗರದಲ್ಲೆಲ್ಲಾ ಹರಡಿತು. ರಾಣಿ ಮತ್ತು ರಾಜ ಉದ್ಯಾನವನಕ್ಕೆ ಬಂದರು. ವೀರಸೇನನೂ ಬಂದ. ತಿಲೋತ್ತಮೆಯನ್ನು ವಶಪಡಿಸಿಕೊಳ್ಳಲು ಇದು ಸುಸಮಯವೆಂದು ಆತನು ಮತ್ತೆ ಒಂದು ಹಂಚಿಕೆ ಹೂಡಿದ. "ಚಂದ್ರರೇಖೆ ಏನಾದಳು?" ಎಂದು ಎಲ್ಲರೂ ಕಾತುರದಿಂದ

ಇದ್ದರೆ "ಏನಾದಳು? ನಮ್ಮ ಪಾಲಿನ ಶನಿಯಂತೆ ಬಂದು ಸೇರಿದಳು ಈ ತಿಲೋತ್ತಮೆ. ಒಡವೆಗಳಿಗಾಗಿ ನಮ್ಮ ಹುಡುಗಿಯನ್ನು ಇವಳೇ ಕೊಂದುಬಿಟ್ಟಿರುತ್ತಾಳೆ. ಇವಳು ಉಟ್ಟುಕೊಂಡಿರುವ ಸೀರೆ ಯಾರದು ಮೊದಲು ಕೇಳಿ" ಎಂದ ವೀರಸೇನ.




ರಾಣಿ ನೋಡಿ "ಹೌದು ಈ ಸೀರೆ ನಮ್ಮ ಹುಡುಗಿಯದು. ಇದು ನಿನಗೆ ಹೇಗೆ ಬಂತು ತಿಲೋತ್ತಮ?" ಎಂದು ಕೇಳಿದಳು. ಅದಕ್ಕೆ ತಿಲೋತ್ತಮೆ "ನಿನ್ನೆ ಜಲಕ್ರೀಡೆಯಾಡಿದ ಮೇಲೆ ಚಂದ್ರರೇಖೆ ಮೊದಲು ಹೊರಗೆ ಬಂದು ಆ ಕತ್ತಲೆಯಲ್ಲಿ ತನ್ನ ಸೀರೆಗೆ ಬದಲಾಗಿ ನನ್ನ ಸೀರೆ ಉಟ್ಟುಕೊಂಡಳು. ನಾನು ನೀರಿಂದ ಮೇಲೆ ಬಂದು ಹೇಳಲು 'ಈಗೇನು ಬದಲಾಯಿಸುವುದು. ನೀನು ನನ್ನ ಸೀರೆ ಉಟ್ಟುಕೋ ಎಂದಳು'" ಎಂದು ಸಮಾಧಾನ ಹೇಳಿದಳು.

"ಇವಳೆಷ್ಟು ಕಪಟ ನಾಟಕವಾಡ್ತಾಳೆ" ಎಂದು ವೀರಸೇನ ತಿಲೋತ್ತಮೆಯ ಮೇಲೆ ನಂಜು ಕಾರಿದ. ಏನೂ ತೋರದೆ ರಾಜ ಮತ್ತು ರಾಣಿಯರು ದುಃಖದಲ್ಲಿ ಮುಳುಗಿದರು. ವೀರಸೇನನೇ ಅಲ್ಲಿ ಆಗ ಅಧಿಕಾರ ಚಲಾಯಿಸಿ ಭಟರೊಂದಿಗೆ "ಈ ಹಂತಕಳನ್ನು ತೆಗೆದುಕೊಂಡು ಹೋಗಿ, ಅಡವಿಯಲ್ಲಿರುವ ನದಿಯ ಆಚೆ ದಡದಲ್ಲಿ ಬಿಟ್ಟುಬನ್ನಿ" ಎಂದು ಆಜ್ಞಾಪಿಸಿದ.

ಸ್ವಲ್ಪ ಸಮಯ ಕಳೆದ ಮೇಲೆ ಅಲ್ಲಿಂದ ನೆಟ್ಟಗೆ ವೀರಸೇನ ಅಡವಿಯಲ್ಲಿದ್ದ ನದಿಯ ಆಚೆ ದಡದ ಕಡೆಗೆ ಹೊರಟು ಹೋದ. ಆತನು ಆ ಪ್ರದೇಶವನ್ನು ಸೇರುವ ಮೊದಲೇ ರಾಜಭಟರು ತಿಲೋತ್ತಮೆಯನ್ನು ಅಲ್ಲಿಬಿಟ್ಟು ಹಿಂತಿರುಗಿದ್ದರು.

"ಇದೇನಿದು, ಯಾವ ಪಾಪವನ್ನೂ ಅರಿಯದ ನನ್ನ ಮೇಲೆ ಈ ಅಪವಾದ ಬಿತ್ತಲ್ಲಾ" ಎಂದು ತಿಲೋತ್ತಮೆ ಅಳುತ್ತಿರುವಾಗ ಎದುರು ವೀರಸೇನನು ನಿಂತು ನಗುತ್ತಾ "ನಿನಗೇನು ಪರವಾಗಿಲ್ಲ ತಿಲೋತ್ತಮು, ನಿನ್ನನ್ನು ಇಲ್ಲಿ ಸಂಧಿಸುವ ಸಲುವಾಗಿಯೇ ನಿನಗೆ ಈ ಶಿಕ್ಷೆ ವಿಧಿಸಿದೆ ನಾನು" ಎಂದ. ತಿಲೋತ್ತಮ ಉಗ್ರಳಾಗಿ ಆತನನ್ನು ತೆಗಳಲು ಪ್ರಾರಂಭಿಸಿದಳು. "ಸಮಾಧಾನ ಹೊಂದು ತಿಲೋತ್ತಮ. ಕೋಪಿಸಿಕೊಳ್ಳಬೇಡ. ನನ್ನನ್ನು ಮದುವೆಯಾಗು. ಮಗಳು ಹೋದ

ಳೆಂಬ ಚಿಂತೆಯಿಂದ ನಮ್ಮ ಬಾವನಿಗೆ ಮತಿ ಕೆಡುವುದು. ಆಗ ರಾಜ್ಯ ನನಗೆ ಬರುತ್ತದೆ. ನಾನು ರಾಜನಾಗುವೆನು. ನೀನು ರಾಣಿ ಯಾಗುವೆಯಂತೆ." ಎಂದು ಹೇಳ ತ್ತಿರುವಲ್ಲಿ ಎಲ್ಲಿಂದಲೋ ಒಂದು ಅಂಬು ತಗುಲಿ 'ಹಾ' ಎಂದೆನ್ನುತ್ತಾ ವೀರಸೇನ ನೆಲಕ್ಕುರುಳಿ ಕುಸಿದುಬಿದ್ದ.

ಮರುಕ್ಷಣದಲ್ಲಿ ಅಲ್ಲಿಗೆ ಬಿಲ್ಲು ಬಾಣ ಗಳನ್ನು ಧರಿಸಿದ ಒಬ್ಬ ಬೇಡರವನು ಬಂದು "ಅಯ್ಯೋ, ಮನುಷ್ಯನೇ! ದೂರದಿಂದ ನೋಡಿ ಯಾವುದೋ ಕಾಡು ಮೃಗವೊಂದು ನಿಮ್ಮನು ಹಿಂಸೆ ಪಡಿಸುತ್ತಿರುವುದೆಂದು ಭಾವಿಸಿ ಬಾಣ ಬಿಟ್ಟೆ ಕ್ಷಮಿಸಿ"ಎಂದು ಬೇಡಿ ಕೊಂಡ.

"ಒಳ್ಳೇ ಕೆಲಸ ಮಾಡಿದೆ ತಾತ. ಇವನು ಮೃಗಕ್ಕಿಂತಲೂ ಕಡೆ" ಎಂದು ನಡೆದ ವಿಷಯವೆಲ್ಲಾ ಹೇಳಿದಳು ತಿಲೋತ್ತಮೆ. ಆತನು ಆಕೆಯನ್ನು ಸಮಾಧಾನ ಪಡಿಸಿ, ತನ್ನ ಗುಡಿಸಲಿಗೆ ಕರೆದುಕೊಂಡು ಹೋದ.

ಅವರು ಹೋಗುತ್ತಿರುವಾಗ ಸಮೀಪ ದಲ್ಲೇ "ದಮ್ಮಯ್ಯಾ, ಕೊಲ್ಲಬೇಡಿ. ನಿಜ ಹೇಳುತ್ತೇನೆ" ಎಂಬ ಆರ್ತನಾದ ಕೇಳಿಸಿತು. ಅಲ್ಲಿಗೆ ಹೋಗಿ ನೋಡಲು ತಿಲೋತ್ತಮೆ ಯನ್ನು ಅಡವಿಯಲ್ಲಿ ಬಿಟ್ಟು ಹಿಂತಿರುಗುತ್ತಿದ್ದ ರಾಜ ಭಟರು ಒಬ್ಬ ಮನುಷ್ಯನನ್ನು ಮರಕ್ಕೆ ಕಟ್ಟಿ "ನಿಜ ಹೇಳು" ಎಂದು ಗದರಿಸು ತ್ತಿದ್ದರು.

ಆ ಖೈದಿ ಹೇಳಿದ ಮಾತುಗಳನ್ನು ಕೇಳಿ ತಿಲೋತ್ತಮೆಯ ಬಾಯಿಂದ ಮಾತು ಹೊರ ಡದೆ ನಿಂತು ಬಿಟ್ಟಳು. ಅವನು ರಾಜಕುಮಾರಿ ಯನ್ನು ಎತ್ತಿಕೊಂಡು ಬಂದ ಕಳ್ಳರಲ್ಲಿ ಒಬ್ಬ ನೆಂತಲೂ ರಾಜ ಭಟರಿಗೆ ಅವನೊಬ್ಬನೇ ಸಿಕ್ಕಿಬಿದ್ದನೆಂದೂ ತಿಳಿಯಿತು. ತಿಲೋತ್ತಮ ಅವನ ಕಟ್ಟುಗಳನ್ನು ಬಿಚ್ಚಿಸಿ, ಚಂದ್ರರೇಖೆ ಯಿರುವ ಸ್ಥಳಕ್ಕೆ ದಾರಿ ತೋರಿಸುವಂತೆ ಹೇಳಿದಳು.

ರಾಜ ಪುತ್ರಿ ಕಣ್ಣಿಗೆ ಬಿದ್ದಕೂಡಲೇ ತಿಲೋತ್ತಮೆ ಆಕೆಯನ್ನು ಆನಂದದಿಂದ ಅಪ್ಪಿಕೊಂಡಳು. ವೀರಸೇನನು ಹೂಡಿದ ದುಷ್ಟ ಸಂಚುಗಳನ್ನು ದಾರಿಯಲ್ಲಿ ಹೇಳಿ ಕೊಳ್ಳುತ್ತಾ ಅವರು ಮತ್ತೆ ಬೇಗನೆ ನಗರ ವನ್ನು ಸೇರಿಕೊಂಡರು.



## ಆಮೆಯ ಚಿಪ್ಪು ತುಂಬಾ ಗಟ್ಟಿಯಾಗಿರುತ್ತೆ



# ಏಕೆ-ಗೊತ್ತೆ?

ಸಮಸ್ತ ಜೀವಕೋಟಿಯನ್ನು ಬ್ರಹ್ಮನು ಸೃಷ್ಟಿ ಮಾಡಿದ್ದು ಮುಗಿದ ಮೇಲೆ ಮಿಕ್ಕ ಚಿಲ್ಲರೆಪಲ್ಲರೆ ಅವಯವಗಳ ಕಲೆಸು ಮೇಲೋಗರವೇ ಆಮೆಯಾಗಿ ಏರ್ಪಟ್ಟಿತು. ಅದರಿಂದಲೇ ಮುಂದಿನ ಕಾಲು ಒಂದು ರೀತಿ ಹಿಂದಿನ ಕಾಲು ಒಂದು ರೀತಿ, ತಲೆ ಹಾವಿನ ತಲೆಯಂತೆ, ಹೀಗೆ ಅದರ ವಿಚಿತ್ರರೂಪ.

ಇಷ್ಟು ವಿಕಾರವಾಗಿ ತಯಾರಾದ ಆಮೆಯು "ಸ್ವಾಮಿ, ಈ ರೂಪದಲ್ಲಿ ನಾನು ಮಿಕ್ಕ ಜಂತುಜಾಲಗಳ ಮಧ್ಯ ಹೇಗೆ ತಿರುಗಾಡಲಿ?" ಎಂದು ಬ್ರಹ್ಮನಿಗೆ ಮೊರೆಯಿಟ್ಟಿತು.

ಅದಕ್ಕೆ ಬ್ರಹ್ಮ "ಅಂದವಾಗಿಲ್ಲವೆಂದು ಕಳವಳ ಪಡಬೇಡ. ಯಾವ ಜೀವಿಗಾದರೂ ಗುಣ ಪ್ರಧಾನವೇ ಹೊರತು ಅಂದವಲ್ಲ. ಅಷ್ಟೇ ಅಲ್ಲದೆ, ಯಾವೊಂದು ಅಪಾಯವೂ ಉಂಟಾಗದಂತೆ ಜೀವನ ಕಳೆಯುವುದು ಅತ್ಯವಶ್ಯಕ. ಅದ್ದರಿಂದಲೇ ಮಿಕ್ಕ ಜಂತುಜಾಲಕ್ಕೆ ಇಲ್ಲದ ಶಕ್ತಿಯನ್ನು ನಿಮ್ಮ ಜಾತಿಗೆ ಕೊಡುತ್ತಿದ್ದೇನೆ. ನೀರಿನಲ್ಲಿಯೂ, ಭೂಮಿಯ ಮೇಲೆಯೂ ನೀವು ನಿಶ್ಚಿಂತೆಯಾಗಿ ಜೀವಿಸಬಹುದು. ಅಷ್ಟೇ ಅಲ್ಲ. ನೀರನ್ನು ಶುಭ್ರಪಡಿಸುವ ಶಕ್ತಿಯನ್ನೂ ಸಹ ನಿಮಗೆ ಕೊಡುತ್ತೇನೆ. ಈ ಸುಗುಣದಿಂದ ಮಾನವನಿಗೆ ಸಹಾಯವಾಗಿ ನಿಮ್ಮ ಬಾಳನ್ನು ಸಾರ್ಥಕ ಮಾಡಿಕೊಳ್ಳಿ" ಎಂದು ಸಮಾಧಾನ ಮಾಡಿದ.

ಕೆಲ ದಿನಗಳು ಕಳೆದ ತರುವಾಯ ಒಂದು ದಿನ ಊಸರವಳ್ಳಿ ಆಮೆಯನ್ನು ಸಂಧಿಸಿತು. ಆಮೆಯನ್ನು ನೋಡಿದ ಕೂಡಲೇ ಅದು ಪಕಪಕನೆ ನಗುತ್ತಾ "ಆಹಾ, ಏನು ನಿನ್ನ ಅಂದ ಚಂದ! ಇಷ್ಟು ವಿಕಾರವಾಗಿರುವ ತಮ್ಮ ಹೆಸರೇನೋ" ಎಂದು ಕೇಳಿತು,

ಆ ಕ್ರೋಶವುಂಟಾಯಿತು ಆಮೆಗೆ. "ನನ್ನನ್ನು ಆಮೆ ಅಂತ ಕರೆಯುವರು. ನನ್ನ ಆಕಾರ ನೋಡಿ ನಕ್ಕೆಯಲ್ಲಾ, ನನ್ನ ಹಿರಿಮೆ ನಿನಗೇನು ಗೊತ್ತು? ನಾವು ನೀರಿನಲ್ಲಿಯೂ, ನೆಲದ ಮೇಲೆಯೂ ಓಡಾಡಬಲ್ಲೆವು. ನಿಮ್ಮಲ್ಲಿ ಅಂತಹ ಒಂದು ಜೀವಿಯನ್ನು ತೋರಿಸು ನೋಡುವಾ? ಅಷ್ಟೇ ಅಲ್ಲ ಮಾನವನಿಗೆ ನಿತ್ಯವೂ ಅವಶ್ಯಕವಾದ ನೀರನ್ನು ಶುಭ್ರಪಡಿಸಿಕೊಡಬಲ್ಲೆವು. ನಾವೆಂದರೆ ಮಾನವನಿಗೆ ಎಷ್ಟು ಪ್ರೇಮುವೋ ನಿನಗೇನು

ಗೊತ್ತು !" ಎಂದು ತನ್ನ ದೊಡ್ಡಸ್ತಿಕೆ ಹೇಳಿ ಕೊಂಡಿತು.

ಇದನ್ನು ಕೇಳಿ ಊಸರವಳ್ಳಿ "ಹಾಗೋ" ಎಂದು ತನ್ನ ದಾರಿ ಹಿಡಿಯಿತು. ಹಾಗೇ ಹೋಗುತ್ತಿರುವಲ್ಲಿ ಅದಕ್ಕೆ ದಾರಿಯಲ್ಲಿ ಒಬ್ಬ ಮನುಷ್ಯ ಸಿಕ್ಕಿದ. ಆತನನ್ನು ನೋಡಿ "ಅಯ್ಯಾ ಮಾನವನೇ,ಆಮೆ ಎಂದರೆ ನಿಮಗೆ ಬಹಳ ಪ್ರೀತಿಯಂತೆ, ಏಕಷ್ಟೊಂದು ಪ್ರೀತಿ?" ಎಂದು ಕೇಳಿತು.

ಅದಕ್ಕೆ ಆತನು "ಅದು ನಮ್ಮ ಬಾವಿಯಲ್ಲಿರುವ ನೀರನ್ನು ಶುಭ್ರಗೊಳಿಸುತ್ತದೆ. ಅದಕ್ಕಿಂತಲೂ ಮುಖ್ಯವಾದ ವಿಷಯವೆಂದರೆ ಅದರ ಮಾಂಸ ತುಂಬಾ ಸವಿಯಾಗಿರುತ್ತದೆ" ಎಂದ.

"ಹಾಗೇನು ವಿಷಯ" ಎಂದು ಊಸರವಳ್ಳಿ ಈ ಮಾತನ್ನಿಷ್ಟು ಇತರ ಜಂತುಗಳಿಗೆ ಹೇಳಿ ಬಿಟ್ಟಿತು. ಸರಿ, ಅಂದಿನಿಂದ ಎಲ್ಲಿ ಆಮೆ ಕಾಣಿಸಿದರೂ ಬಿಡದೆ ಜಂತುಗಳು ಕೊಂದುತಿನ್ನಲು ಪ್ರಾರಂಭಿಸಿದವು.

ಹೀಗಿರುವಲ್ಲಿ ಊಸರವಳ್ಳಿ ಬೇಕೆಂತಲೇ ಮತ್ತೆ ಆಮೆಯ ಹತ್ತಿರ ಬಂದು "ಅಂದು ಅಷ್ಟೊಂದು ಜಂಬ ಕೊಚ್ಚಿಕೊಂಡೆಯಲ್ಲಾ, ಇಂದು ನಿಮ್ಮ ಅವಸ್ಥೆ ನೋಡಿದೆಯಾ?" ಎಂದು ಚುಚ್ಚಿ ಮಾತನಾಡಿತು.

"ನಾನು ಹೇಳಿದ್ದರಲ್ಲಿ ಸುಳ್ಳೇನೂ ಇಲ್ಲವಲ್ಲಾ. ಏಕೆ ಹೀಗೆ ನಡೆಯುತ್ತಿದೆಯೋ ತಿಳಿಯದು" ಎಂದು ಆಮೆ ಚಿಂತಿಸಿತು. ಇಷ್ಟರಲ್ಲಿ ಊಸರವಳ್ಳಿ ಮಾಯವಾಗಿ ಅದರ ಸ್ಥಾನದಲ್ಲಿ ಬ್ರಹ್ಮ ಪ್ರತ್ಯಕ್ಷವಾದ. "ಎಲೈ ಕೂರ್ಮವೇ, ನಿನ್ನ ಪಾಡಿಗೆ ನೀನು ಇದ್ದರೆ ಚೆನ್ನಾಗಿರುತ್ತಿತ್ತು. ಹಾಗಿಲ್ಲದೆ ದೊಡ್ಡಸ್ತಿಕೆ ಕೊಚ್ಚಿಕೊಂಡು ಮುಪ್ಪು ತಂದುಕೊಂಡೆ. ನಿನ್ನ ಅಹಂಕಾರದ ಮೂಲಕ ನಿಮ್ಮ ಜಾತಿಯೆಲ್ಲಾ ನಾಶವಾಗುತ್ತಿದೆ" ಎಂದ. ಆಗ ಆಮೆ "ಸ್ವಾಮಿ. ಕ್ಷಮಿಸಿ, ಸುಮ್ಮನಿರಲಾರದೆ ಬಾಯಿಬಿಟ್ಟೆ. ತಕ್ಕ ಪ್ರಾಯಶ್ಚಿತ್ತವಾಯಿತು. ಇನ್ನು ಮೇಲೆ ಬುದ್ಧಿ ತಂದುಕೊಂಡು ಜೀವಿಸುವೆವು. ನಮ್ಮ ಜಾತಿ ಉಳಿಯುವಂತೆ ಮಾಡು" ಎಂದು ಬೇಡಿಕೊಂಡಿತು.

ಅದರ ಪಶ್ಚಾತ್ತಾಪಕ್ಕೆ ಮೆಚ್ಚಿ ಬ್ರಹ್ಮನು ಆಮೆಯ ಜಾತಿಗೆ ಉಕ್ಕಿನಂತಹ ಕವಚವೊಂದನ್ನು ಪ್ರಸಾದಿಸಿ, ಅದೃಶ್ಯನಾದನು.



## ಒಗಟುಗಳು

ಇವುಗಳೇನು ಹೇಳ ಬಲ್ಲಿರಾ?

1. ಮನೆ ಮೇಲೆ ಮನೆ ಕಟ್ಟಿ, ಗುಡಿ ಮೇಲೆ ಗುಡಿ ಕಟ್ಟಿ, ಕೊನೆಮೇಲೆ ಕೂತವನೆ ಕೊನಾರ್‌ಸೆಟ್ಟಿ

—ಕಮಲಮ್ಮ, ಕೊಡಗರಳ್ಳಿ

2. ಕೇಕಂಬಳಿ ಪರ್ವತಗೌಡ ಸರಿಹೊತ್ತಿನಲ್ಲಿ ಓಡಾಡುತ್ತಾನೆ.

—ಎಂ.ಬಿ. ಲೀಲ, ಮಲ್ಲೇಶ್ವರ

3. ಹಿಡಿದರೆ ಹಿಡಿತುಂಬಾ; ಬಿಟ್ಟರೆ ಮನೆತುಂಬಾ.
4. ಮೂರು ಜನ ಗೆಳೆಯರು ನೀರಿಗೆ ಬಿದ್ದರೆ ಒಬ್ಬ ತೇಲುತ್ತಾನೆ, ಮತ್ತೊಬ್ಬ ಮುಳುಗುತ್ತಾನೆ; ಮಗದೊಬ್ಬ ಕರಗುತ್ತಾನೆ.
5. ಮನುಷ್ಯರಿಗೆ ಮಾನ ಮರ್ಯಾದೆಯೆಲ್ಲಾ ಒಂದು ಗಿಡದಿಂದ. ಅದೇನು?
6. ಬೆಳಕಾಗಲಿ, ಬೆಳಕಾಗಲಿ ಎನ್ನುತ್ತದೆ ಒಂದು. ಬೆಳಗಾಗದಿರಲಿ ಬೆಳಗಾಗದಿರಲಿ ಎನ್ನುವುದು ಮತ್ತೊಂದು. ಬೆಳಗಾದರೇನು ಬೆಳಗಾಗದಿದ್ದರೇನು ಎನ್ನುವುದು ಮಗದೊಂದು.

—ಬಿ ಎಸ್. ಕೃಷ್ಣಯ್ಯ ಸೆಟ್ಟಿ.

7. ಅಡವಿಯೊಳಗೆ ಹುಟ್ಟುವುದು, ಅಂಗವರ ಡಾಗುವುದು; ಕಡುಸ್ವರದಿಂದ ಗಾನವನು ಮಾಳ್ಪುದು, ಕಂಜಾಕ್ಷಿಯರ ಕರದಲ್ಲಿ ನಲಿದಾಡುವುದು, ಎಂಜಲನುಣಿಸುವುದು ಮೂರು ಜಗಕೆ

—ಡಿ. ಎಸ್. ಸದಾಶಿವ.

8. 'ಆಕಾಶ' ದ ನಡು, 'ವೇದ' ದ ಆದಿ, 'ನಾರಿ'ಯ ತಲೆ, ಇವುಗಳ ಸಹಾಯದಿಂದ ಹರಿಯುವ ನದಿ ಯಾವುದು?
9. ಸಾವಿರಾರು ಮಕ್ಕಳಿಗೆ ಒಂದೇ ಉಡಿದಾರ
10. ಅತ್ತಿತ್ತ ಹೊಯಿತು, ನಡುವೆ ಬಂದು ಕುಳಿತಿತು

—ಪಿ. ಗೋಪಾಲಕೃಷ್ಣರಾವ್

## ಸಂಪಿಗೆ

ಎತ್ತರ ಮರದಲಿ
ಮುತ್ತಿನ ಕಾಂತಿಯ
ಘಮ ಘಮ ಹೂಗಳು ಆಡುತಿವೆ!
ಹಳದಿಯ ಬಣ್ಣದ
ಹೊಳೆಯುವ ಸಂಪಿಗೆ
ಕಣ್ಣಿಗೆ ಹಬ್ಬವ ನೀಡುತಿವೆ!
ಹಸರಿನ ಮೆತ್ತನೆ
ಹಾಸಿಗೆ ಮೇಲೆಯೆ
ಘಮಲಿನ "ರಾಣಿ" ನಗುತಿಹಳು!
ಕಂಪನು ಹರಡುತ
ಸೊಂಪಿನ 'ರಾಜಿ' ಯು
ಸುಮವನು ಸುರಿಸುತ ಕರೆಯುವಳು
ಬಣ್ಣದ ಹೂಗಳ
ಪರಿಮಳ ಹರಡುತ
ತಣ್ಣನೆ ಗಾಳಿಯು ಬೀಸುತಿದೆ!
ಸಂಪಿಗೆ ಮುಡಿಯಿರಿ
ಕಂಪನು ಹರಡಿರಿ
ಎನ್ನುತ ಗಾಳಿಯು ಹೇಳುತಿದೆ!

—'ಕಂದಲೋಲ' ಕೀಲಗಾವಲು

## ಮಿಂಚು ಹುಳು

ಕತ್ತಲಲ್ಲಿ ಪುಟ್ಟ ಬೆಳಕ
ನಾನು ಕಂಡೆನು.
ಎಂಥ ಬೆಳಕು ಎಂದು ಕೈಲಿ
ಮುಟ್ಟ ಹೋದೆನು
ಬೆಳಕು ಮಾಯವಾಗಿ, ಅಷ್ಟು
ದೂರ ಹೋಯಿತು
ಅದುವೆ ಮಿಂಚು ಹುಳುವು ಎಂದು
ಆಗ ತಿಳಿಯಿತು.

—ಚಿ. ಉದಯಶಂಕರ.

# ಯೊ, ಯು

'ಯೊ, ಯು'—ಇದೇನಿದು? ಎಂದು ನಿಮಗೆ ಆಶ್ಚರ್ಯವಾಗಬಹುದು ಅಲ್ಲವೆ? ರಾಮ, ಭೀಮ ಅಂತ ನಾವು ಹೆಸರಿಟ್ಟುಕೊಳ್ಳುವುದಿಲ್ಲವೆ, ಹಾಗೆ ಚೀನಾ ದೇಶದಲ್ಲಿ 'ಯೊ, ಯು' ಷನ್, ಮುಂತಾದ ಹೆಸರುಗಳು ಸಾಮಾನ್ಯ. ನಮ್ಮ ಭಾರತ ದೇಶದಂತೆಯೇ 'ಚೀನಾ' ದೇಶವೂ ಪುರಾತನ ಕಾಲದಿಂದಲೂ ಭವ್ಯನಾಗರೀಕತೆಯ ತೌರೂರು. ಎರಕಹೊಯ್ದು ಅಚ್ಚು ಮಾಡುವುದನ್ನು ಕಂಡು ಹಿಡಿದುದು ಅಲ್ಲಿ; ಉತ್ತರಮುಖಿ ಇತರರಿಗೆ ತಿಳಿದುದು ಅಲ್ಲಿಂದ. 'ಚೀನಾ'ದ ನೆಲ ಹಳದಿ, ನದಿ ಹಳದಿ, ನೀರೂ ಹಳದಿ, ಜನ ಹಳದಿ ಬಣ್ಣದವರು. ಅಲ್ಲಿಯ ಹಸನಾದ ಹಳದಿಯಮಣ್ಣಿನಿಂದ ಅಂದವಾದ ಪಾತ್ರೆಗಳನ್ನು ಮಾಡಿ ಚಿತ್ತಾರಕೊರೆದು ಸೊಗಸಾಗಿ ಮಾಡುತ್ತಾರೆ.

ಇಂತಹ ನಾಗರಿಕ ದೇಶದಲ್ಲಿ 'ಹಳದೀ ನದಿ'ಗೆ ಆಗಾಗ್ಗೆ ಹುಚ್ಚು ಪ್ರವಾಹಬರುತ್ತಿತ್ತು. ಜನ, ದನ, ಧಾನ್ಯಗಳನ್ನು ನುಂಗಿದೇಶಕ್ಕೆ ಅಪಾರ ಕಷ್ಟ ನಷ್ಟಗಳನ್ನುಂಟುಮಾಡುತ್ತಿತ್ತು.

ಬಲುಹಿಂದೆ 'ಯೊ' ಎಂಬ ರಾಜ ಆ ನಾಡಿನ ದೊರೆಯಾಗಿದ್ದ. ಆತ ಬಲು ಒಳ್ಳೆಯ ದೊರೆ. ಪಾಪ, ಜನ ಸುಖವಾಗಿರಲು 'ಹಳದಿ' ನದಿಯ ಪ್ರವಾಹವನ್ನು ತಡೆಗಟ್ಟಲು ಬಲು ಪ್ರಯತ್ನಿಸಿದ. ಏನಾದರೂ ಸಾಧ್ಯವಾಗಲೇ ಇಲ್ಲ. ಏನು ಮಾಡುವುದು? 'ನನ್ನ ಆಳ್ವಿಕೆಯಲ್ಲಿ ಜನಕ್ಕೆ ಸುಖ ದೊರೆಯಲಿಲ್ಲವಲ್ಲಾ' ಎಂದು ಚಿಂತಿಸಿದ. ಹುಚ್ಚು ಪ್ರವಾಹವನ್ನು ತಡೆಗಟ್ಟಲು ಅದಕ್ಕಾಗಿ ಒಬ್ಬ ಮಂತ್ರಿಯನ್ನೇ ನಿಯಮಿಸಿದ. ಆ ಮುದ್ದು ಮಂತ್ರಿ ಯೋಚಿಸಿ ಅನೇಕ ಯೋಜನೆಗಳನ್ನು ಕೈಗೊಂಡು ಸತತವಾಗಿ ಒಂದಲ್ಲ, ಎರಡಲ್ಲ, ಒಂಬತ್ತು ವರ್ಷ ದುಡಿದ. ಆದರೂ 'ಪ್ರವಾಹವನ್ನು ತಡೆಗಟ್ಟಲು, ಹೂಡಿದ ಹೂಟಗಳೆಲ್ಲ ಹುಸಿಯಾದವು. ರಾಜನಿಗೆ ಕೋಪಬಂದು ಅವನನ್ನು ಮಂತ್ರಿ ಪದವಿಯಿಂದ ತೆಗೆದು ಅವನ ಮಗ (ಮಂತ್ರಿಯ ಮಗ) 'ಯು' ವನ್ನು ನಿಯಮಿಸಿದ. ಪಾಪ 'ಯು' ತಾನೆ ಹೇಗೆ ಪ್ರವಾಹದ ಹಾವಳಿಯಿಂದ ದೇಶವನ್ನು ಬದುಕಿಸಿಯಾನು? ಅವನಿಗೆ ತಲೆ ಕೆಟ್ಟಿತು. ಆದರೂ.... ಮನಸ್ಸನ್ನು ಧೃಡ ಮಾಡಿಕೊಂಡು ಅನೇಕ ಯೋಜನೆಗಳನ್ನು ಕೈಗೊಂಡ. ಆದರೂ ಸಫಲವಾಗಲಿಲ್ಲ.

ಆತ ಒಂದು ದಿನ ಚಿಂತಾಕ್ರಾಂತನಾಗಿ ಬೀದಿಯಲ್ಲಿ ಹೋಗುತ್ತಿದ್ದ; ಜೋರಾಗಿ ಮಳೆ ಬಂತು. ಅಲ್ಲೇ ರಸ್ತೆಯ ಒದಿಯಲ್ಲಿ ತುಂಬು ಎಲೆಗಳಿಂದ ಕೂಡಿದ್ದ ಹಸುರು ಮರದಡಿಯಲ್ಲಿ ನಿಂತ.

ಸಮೀಪದಲ್ಲೇ ಒಂದು ಆಮೆ ಮಳೆಗೆ ಬೆನ್ನೊಡ್ಡಿಕೊಂಡು ರಸ್ತೆಯಂಚಿನಲ್ಲಿ ಬಿದ್ದಿತ್ತು. ಅದು ಇವನ ಕಣ್ಣಿಗೆ ಬಿತ್ತು. 'ಎಲಎಲಾ, ಇದೇ

ಜಿ. ಪಿ. ಸುಬ್ಬರಾಯ, ಬಿ. ಎ.

ನಿದು? ಆಮೆ ಮಳೆಗೆ ಮೈ ಯೊಡ್ಡಿಕೊಂಡು ಬಿದ್ದಿದೆ? ಎಂದು ಕೂತೂಹಲವಾಗಿ ವೀಕ್ಷಿಸಿದ. ಆಮೆಯ ಚಿಪ್ಪು ಹಲವಾರು ಭಾಗಗಳಾಗಿದ್ದುದು ಕಂಡಿತು. ಅದರ ಚಿಪ್ಪಿನ ಮೇಲೆ ಬಿದ್ದ ಮಳೆಯ ನೀರೆಲ್ಲ ಸಣ್ಣ ಸಣ್ಣ ಕಾಲುವೆಗಳಂತಿದ್ದ ಸಂದುಗಳಲ್ಲಿ ಹರಿದು ಕೆಳಗೆ ಬೀಳುತ್ತಿತ್ತು. 'ಯು'ಗೆ ಪರಮಾನಂದವಾಯಿತು! ಈ ಜನ್ಮ ಸಾರ್ಥಕವಾಯಿತು. ಎಂದು ಖುಷಿಯಿಂದ ಕುಣಿದಾಡಿದ. ಮುಖವರಳಿತು.

ತಿಳಿನಗೆ ಮೂಡಿತು. ಮಳೆ ನಿಂತ ನಂತರ 'ಹುಂ' ಎಂದು ಸಂತೋಷದಿಂದೆ, ಸರಸರನೆ ತನ್ನ ಮನೆ ಸೇರಿದ. 'ಹಳದೀ ನದಿಯ' ಪ್ರವಾಹವನ್ನು ನೀಗಲು, ದೇಶವನ್ನು ಪಾರುಮಾಡಲು ಒಂದು ಯೋಜನೆಯನ್ನು ಹೂಡಿದ. ರಾಜ್ಯವನ್ನು ಹಲವಾರು ಭಾಗಗಳಾಗಿ ವಿಭಾಗಿಸಿ ಪ್ರತಿಯೊಂದರಲ್ಲೂ ಹರಿಯುವ ಸಣ್ಣ ಸಣ್ಣ, ಹಳದಿ ನದಿಯ ಉಪನದಿಗಳ ನೀರೆಲ್ಲ ಸರಾಗವಾಗಿ ಹರಿದು ಸಮುದ್ರವನ್ನು ಸೇರುವಂತೆ ಆಳವಾದ ಕಾಲುವೆಗಳನ್ನು ತೋಡಿಸಿದ—ಹಳದೀ ನದಿಯ ನೀರು ದೊಡ್ಡ ದೊಡ್ಡ ಆಳವಾದ ಅನೇಕ ಕಾಲುವೆಗಳ ಮೂಲಕ ನಿಧಾನವಾಗಿ ಹರಿಯುವಂತೆ ಏರ್ಪಡಿಸಿದ! ಜನಸೇವೆ ದೇಶಸೇವೆಯೇ ಮೇಲೆಂದೆಣಿಸಿ ಅವಿಶ್ರಾಂತನಾಗಿ ದೇಶಕ್ಕೆದುಡಿದ. ಪ್ರವಾಹದ ಹಾವಳಿಯನ್ನು ತಪ್ಪಿಸಿದ. ಕೆಲಸ ಪೂರ್ತಿಯಾಗುವವರೆಗೂ ಮನೆ ಮಠಗಳನ್ನು ಮರೆತ. ಎಷ್ಟೋ ದಿನ ಆತ ತಾನು ತನ್ನ ಮನೆಯ ಮುಂದೇ ಹೋಗುತ್ತಿದ್ದರೂ ಮನೆಯೊಳಗೆ ಕಾಲಿಕ್ಕುತ್ತಿರಲಿಲ್ಲವಂತೆ. ಒಂದು ದಿನ ತನ್ನ ಮನೆಯ ಮುಂಭಾಗದಲ್ಲಿ ಹೋಗುವಾಗ ಆತನ ಮಗು ಅಳುತಿದ್ದ ಶಬ್ದ ಕೇಳಿತಂತೆ! ಆದರೂ ಒಳಗೆಹೋಗದೆ ನಿಶ್ಚಲ ಮನಸ್ಕನಾಗಿ, ತನ್ನ ಕಾರ್ಯದಲ್ಲಿ ನಿರತನಾಗಿ ದೇಶ ಸೇವೆ ಮಾಡಿದನಂತೆ. ಸ್ವಾಮಿ ಭಕ್ತಿ, ದೇಶ ಪ್ರೇಮ, ಜನ ಸೇವೆಗಿಂತ ಮಿಗಿಲುಂಟೆ?

ಹಳದೀ ನದಿಯ ಹುಚ್ಚು ಪ್ರವಾಹದಿಂದ ಹಾಳಾಗಿ ಹೋಗಿದ್ದ ಹೊಲಸು ನಾಡು ಸರ್ವಸಂಪತ್ತಿನ ನಲ್ಮೆಯ ನಾಡಾಯಿತು, ಜನರು ಸುಖದಿಂದ ಸಂತೋಷದಿಂದ ಪ್ರವಾಹದ ದಿಗಿಲನ್ನು ಮರೆತು ತಮ್ಮ ಭೂಮಿಕಾಣಿಗಳನ್ನು ದನಕರುಗಳನ್ನು ಆಸ್ತಿ ಪಾಸ್ತಿಗಳನ್ನು ನೋಡಿಕೊಂಡು 'ಯು' ಗೆ ಚಿರಋಣಿಗಳಾದರು.

ಅಲ್ಲಾ....ನಾವು 'ಅದೇನು ಮಹಾ, ಅದು ಯಾತಕ್ಕೂ ಪ್ರಯೋಜನವಿಲ್ಲ' ಎಂದು, ಎಷ್ಟೋ ಪದಾರ್ಥಗಳನ್ನೂ ಪ್ರಾಣಿಗಳನ್ನೂ ಜನರನ್ನೂ, ನಿಕೃಷ್ಟಭಾವನೆಯಿಂದ ನೋಡುತ್ತೇವೆ ಅಲ್ಲವೆ? ನೋಡಿ, ಆಮೆಯ ಬೆನ್ನು ಚಿಪ್ಪನ್ನು ನೋಡಿ 'ಯು' ಚೀನಾವನ್ನು ಬದುಕಿಸಿದ. ಚೀನೀ ಜನ ಇಂದಿಗೂ ಅವನನ್ನು ನೆನೆಯುತ್ತಾರೆ.

ಏನೇ ಸಿಗಲಿ, ಏನೇ ಇರಲಿ, ಏನೇ ಕಾಣಲಿ, ಯಾವ ವಸ್ತುವೇ ಆಗಲಿ, 'ಅದೇನುಮಹಾ' ಎಂದು ಕಡೆಗಣಿಸಬಾರದು ಅಲ್ಲವೆ?



## ನಗು

ನಗು ಮಗು ನಗು
ಹಲ್ಲು ಬಿಟ್ಟು ನಗು
ಕಿಲ ಕಿಲ ನಗು
ಹುಚ್ಚು ಹುಚ್ಚು ನಗು
ನಸು ನಸು ನಗು
ಎದ್ದು ಬಿದ್ದು ನಗು
ಕಿಟಿ ಕಿಟಿ ನಗು
ಬಾಯಿ ಬಿಚ್ಚಿ ನಗು
ನಗು ನಗು ನಗು
ಹ-ಹ್ಹ-ಹ್ಹಾ ನಗು.

—ಹ..ರಾ. ಕಿವಿಯೂರು.

---

## ಚುಟಕ

ದಟ್ಟ ವಾಗಿಹ ಕಾಡು
ಪಟ್ಟೆ ಹುಲಿಗಳ ಬೀಡು
ಗಿರಿಯ ಬುಡದಲಿ
ಗವಿಗಳೆಡೆಯಲಿ
ಮಾಡಿ ಕೊಂಡಿವೆ ಬೀಡು

—ರಾವ ರಾವ್, ಹೂಡೆ;

---

### ಒಗಟುಗಳ—ಉತ್ತರ

1. ಜೇನು ನೊಣ. 2. ಹೆಗ್ಗಣ. 3. ದೀಪದ ಬೆಳಕು. 4. ಎಲೆ, ಅಡಿಕೆ, ಸುಣ್ಣ 5. ಹತ್ತಿಗಿಡ. 6. ಹಾಸಿಗೆ, ಒಲೆ, ಉಟ್ಟೆ 7. ಬೀಸುವ ಕಲ್ಲು. 8 ಕಾವೇರಿ. 9. ಕಸಬರಿಕೆ. 10. ಲಾಂದ್ರ ದೀಪ.

## ಗಾದೆಗಳು—ಸ್ತ್ರೀ

(ಮುಂದುವರಿದುದು)

28. ಕಂಡರೆ ಸುಂಕ. ಕಾಣದಿದ್ದರೆ ಬಿಂಕ.
29. ಅವಸರದಲ್ಲಿ ಮುದುಕಿ ಮೈ ನೆರೆದಳಂತೆ.
30. ಕರೆದು ಹೆಣ್ಣು ಕೊಟ್ಟರೆ ಮಲರೋಗ ಬಂತಂತೆ.
31. ಮಾಂಸದಾಸೆಗೆ ಮತ್ಸ್ಯ ಸಿಲುಕಿದಂತೆ.
32. ಮನೆಗೆ ಬಂದ ಲಕ್ಷ್ಮಿಯನ್ನು ಒದೆದೋಡಿಸುವುದೇ?
33. ಮುಪ್ಪಿನ ಕಾಲಕ್ಕೆ ಮೂರು ಮಂದಿ ಹೆಂಡಂದಿರು.
34. ಓಡಿಹೋದರೂ ಕೇಡು ತಪ್ಪದು.
35. ಊರಿಗೆ ಅರಸನಾದರೂ ತಾಯಿಗೆ ಮಗನೆ
36. ತಾಯಿ ಮಾಡಿದ ಹೊಟ್ಟೆ; ಊರುಮಾಡಿದ ಕೊಳಗ.
37. ನೀರಗಣ್ಣಿನವರು ಊರು ಹಾಳುಮಾಡಿದರು.
38. ದಾಸಗೆ ಭಯವಿಲ್ಲ; ವೈಶ್ಯೆಗೆ ಕರುಣವಿಲ್ಲ
39. ಗಂಡನು ಕೂತು ಕೆಟ್ಟ; ಹೆಂಗಸು ತಿರಿದು ಕೆಟ್ಟಳು.
40. ತಾಮ್ರದ ದುಡ್ಡು ತಾಯಿ ಮಕ್ಕಳನು ಕೆಡಿಸಿತು.
41. ಪ್ರೀತಿ ಇರುವಲ್ಲಿ ನೀತಿ ಇರುವುದು.
42. ಮನೆಗೆ ಮಾನಿನಿ ಭೂಷಣ; ಸತಿಗೆ ಪತಿ ಭೂಷಣ
43. ತಾಯಿಸತ್ತರೆ ತಂದೆ ಮನೆಯಲ್ಲಿನಿಲ್ಲಬಾರದು. ಮಳೆ ನಿಂತಮೇಲೆ ಮರದಡಿ ನಿಲ್ಲಬಾರದು.
44. ಮನೆ ತಪ್ಪಿದ ಹೆಣ್ಣಿಗೆ ಮಾತು ತಪ್ಪಿದ್ದಲ್ಲ
45. ಗಂಡನ ಗುಮಾನಿ ಹೆಂಡತಿ ಮೇಲೆ.
46. ಕರುಳಿಲ್ಲದ ಕೋಮಲೆ ಕರಾಳಿಯೇ ಸೈ.
47. ಅಂತಸ್ತಿಲ್ಲದ ಅಳಿಯನಿಗೆ ಅಲಕ್ಷ್ಯವೇ ಗತಿ
48. ಹದಿನಾರರ ಹೆಣ್ಣು. ಅಪ್ಸರೆ.
49. ಗುಣವಿಲ್ಲದ ರೂಪಸಿ ಮರುಳುಮಾಡುವ ರಕ್ಕಸಿ.

ರಾಮರಾಯ—ಏನು ರಾಯರೆ, ನಿಮ್ಮ ಅಳಿಯ ದೀಪಾವಳಿಗೆ ಬಂದಾಗ ನನ್ನ ಸಂಗಡ ಎಷ್ಟು ಸವಿಮಾತಾಡಿದ್ದರು. ಆದರೆ ಈ ಸಾರೆ ಬಂದಾಗ ಬಿಕ್ಕೊಂಡು ಇನ್ದಾರೆ.

ಕೃಷ್ಣರಾಯ—ಹೌದು ರಾಯರೆ, ಕಳೆದ ವರ್ಷ ಅವರು ಸಕ್ಕರೀಕಾರ್ಖಾನೆಯೊಳಗ ಹುದ್ದೆಯಲ್ಲಿದ್ದರು. ಆದರೆ ಈಗ ಅವರು ಮಿಲಿಟರಿ ಖಾತೆಯೊಳಗೆ ಸೇರಿದ್ದಾರೆ.

—ಬಿ. ಎಸ್. ಸರ್‌ನಾಯಕ.

* * *

ತಂದೆ—ಏನೋ ರಂಗ, ಎಲ್ಲಿ ಹೋಗಿದ್ಯೋ?

ರಂಗ—(ಓಡಿಬರುತ್ತಾ) ಅಪ್ಪಾ, ಪೋಸ್ಟುಮನ್ ಆಟ ಆಡಿ ಬಂದೆ. ಎಲ್ಲರ ಮನೆಗೆ ಒಂದೊಂದು ಕಾಗದ ಕೊಟ್ಟು ಬಂದೆ.

ತಂದೆ—ಯಾವ ಕಾಗದವೋ? ಎಲ್ಲಿತ್ತೋ ಅಷ್ಟು ಕಾಗದ?

ರಂಗ—ನೆನ್ನೆ ನೀವು ಕಚೇರಿಯಿಂದ ಕಾಗದದ ಗಂಟು ತಂದು ಕಟ್ಟಿಟ್ಟಿದ್ದಿರಲ್ಲ ಅದೇ ಕಾಗದ ವಪ್ಪ. ಬೇರೇನೂ ಅಲ್ಲ.

—ವಿನಾಯಕ ಕುಲಕರ್ಣಿ.

* * *

ನೆಂಟ—ಲೋ ಮಗೂ, ನೀನು ಈಗ ಯಾವ ಪಾಠ ಓದತ್ತಿದ್ದೀಯಪ್ಪಾ?

ಹುಡುಗ—ನಾನು ಈಗ 'ಆಪತ್ತಿಗಾದವನೇ ನೆಂಟ' ಎಂಬ ಕಥೆ ಓದುತ್ತಿದ್ದೇನೆ.

—ಎಂ. ವಿ. ವೆಂಕಟರಾಮು.

* * *

ಪೋಲಿಸ್—ಎಲೋ, ಈವತ್ತು ನಿನ್ನ ಬಿಡುಗಡೆಯಾಗಿದೆ. ನಿನ್ನ ಕಂಬಳಿಯನ್ನು ತೆಗೆದುಕೊಂಡು ಹೊರಗೆ ಬಾ.

ಕೈದಿ—ಬುದ್ದೀ, ಕಂಬ್ಳಿ ಇಲ್ಲೇ ಇರಲಿ, ಇನ್ನೊಮ್ಮೆ ಬಂದಾಗ ಬೇಕಾಗುತ್ತೆ.

—ಎ ಎಂ. ಸರೋಜ.

ರಾಮಣ್ಣ—ರೀ, ನನ್ನ ಹುಡಿಗಿ ಹಾರ್ಮೋನಿಯಂ ಬಾರ್ಸಿ ಬಾರ್ಸಿ ಎರಡು ಬೆರಳು ಮುರಿದೇ ಹೋಯ್ತು.

ರಂಗಣ್ಣ—(ತಾತ್ಸಾರದಿಂದ) ಅದೇನ್ ಮಹಾ ಬಿಡಿ! ನಮ್ಮ ಹುಡುಗಿ ಬಾರ್ಸಿ ಬಾರ್ಸಿ ಎರಡು ಹಾರ್ಮೋನಿಯಂಗಳನ್ನೇ ಮುರಿದು ಬಿಟ್ಳು.

* * *

ಗಿರಾಕಿ—ನನ್ನ ಮಗಳಿಗೆ ಲಂಗಕ್ಕೆ ಎಷ್ಟು ಗಜ ಬೇಕಪ್ಪ, ಟೈಲರ್!

ದರ್ಜಿ—ಮಗೂಗೆ ಎಷ್ಟು ವರ್ಷ ರಾಯರೇ?

ಗಿರಾಕಿ—ಏನ್ ಈಗ ಇಪ್ಪತ್ತು ವರ್ಷ ತುಂಬಿದೆ ಅಷ್ಟೆ!

* * *

ತಾತ—ಯಾಕೆ ಅಳತೀಯೋ ಮಗೂ?

ಮಗು—(ಅಳುತ್ತಾ) ಅಪ್ಪ ಗೋಡೆಗೆ ಮೊಳೆ ಹೊಡೀತಿದ್ದ, ಸುತ್ತಿಗೆ ಏಟು ತಪ್ಪಿ ಅವನ ಕೈಗೆ ಬಿದ್ದುಬಿಡ್ತು.

ತಾತ—ಅಯ್ಯೋ ಹುಚ್ಚ! ಅಪ್ಪನ ಕೈಗೆ ಏಟು ಬಿದ್ರೆ ಅಳೋದೇನೋ? ನಗೋದು ಬಿಟ್ಟು ಬಿಟ್ಟು?

ಮಗು—ನಕ್ಕೆ! ತಾತ, ಗಟ್ಟಿಯಾಗಿ ನಕ್ಕೆ!! ಅಪ್ಪ ಎರಡು ಬಾರಿಸಿದ ಕೆನ್ನೆಗೆ. ಅದಕ್ಕೇ ಅಳ್ತಿರೋದು.

* * *

ಉಪಾಧ್ಯಾಯ—ನಿಮ್ಮ ಪರೀಕ್ಷೆ ಹತ್ತಿರ ಬರುತ್ತಿದೆ. ಒಂದೇ ವಾರ ಸಮಯವಿದೆ. ನಿಮ್ಮ ಕಟ್ಟ ಕಡೆಯ ಪ್ರಶ್ನೆಗಳಿದ್ದರೆ ಕೇಳಿಬಿಡಿ. ಉತ್ತರ ಹೇಳುತ್ತೇನೆ.

ಕಿಲಾಡಿ—ಸಾರ್! ಪ್ರಶ್ನೆ ಪತ್ರಿಕೆಗಳು ಯಾವ ಪ್ರೆಸ್ಸಿನಲ್ಲಿ ಅಚ್ಚಾಗುತ್ತಿವೆ. ಅದೊಂದು ತಿಳಿಸಿಬಿಡಿ ಸಾರ್.

—ಡಿ ಪಿ. ಶ್ರೀನಿವಾಸ. ಬೆಂಗಳೂರು.

# ಮದರಾಸಿನಲ್ಲಿ ನಮ್ಮ ಶ್ರೀ ಸರ್ಕಾರರು

## ಎಲ್ಲಿ ಸರ್ಕಾರರೋ ಅಲ್ಲಿ ಚಂದಮಾಮ!

**ಚಂದಮಾಮ ವಾಚಕರಿಗೊಂದು ಸಂತೋಷ ವಾರ್ತೆ!**

ಕಲಕತ್ತಾ, ಬೊಂಬಾಯಿ ನಗರಗಳಲ್ಲಿ ತಮ್ಮ ಅದ್ಭುತ ಯಕ್ಷಿಣಿ ವಿದ್ಯಾ ಪ್ರದರ್ಶನ ನಡೆಸಿ ದಿಗ್ವಿಜಯ ಪಡೆದ ಶ್ರೀ ಪಿ. ಸಿ. ಸರ್ಕಾರರು ನಮ್ಮ ಮದರಾಸು ನಗರಕ್ಕೂ ಇದೀಗ ಬಂದಿದ್ದರು. ಇಂಗ್ಲೆಂಡು, ಫ್ರಾನ್ಸು, ಜರ್ಮನಿ, ಅಮೆರಿಕಾ ಮುಂತಾದ ದೇಶ ವಿದೇಶಗಳ ಜನರನ್ನೇ ಮುಗ್ಧಗೊಳಿಸಿದ ಸರ್ಕಾರರು ಮದರಾಸಿನ ಪೌರರನ್ನೂ ತಮ್ಮ ಪ್ರದರ್ಶನದ ಮೂಲಕ ಅಚ್ಚರಿಗೊಳಿಸಿದರೆಂದರೆ ಅದರಲ್ಲಿ ಆಶ್ಚರ್ಯವೇನಿದೆ? ಅನೇಕ ಮಂದಿ ಜನರು "ಸರ್ಕಾರರಿಗೆ ಸಮಾನರಿಲ್ಲ" ವೆಂದು ಅನ್ನುತ್ತಿರುವುದನ್ನು ಕೇಳಿದ್ದೇವೆ.

ಸರ್ಕಾರರ ಪ್ರದರ್ಶನದ ವಿಶೇಷತೆಯೇನೆಂದರೆ ಪ್ರತಿ ಟ್ರಿಕ್ಕಿನಲ್ಲಿಯೂ ಒಂದು ನವೀನತೆ, ಅತಿ ಅಸಾಧ್ಯವೆಂಬುದನ್ನೂ ಅತಿ ಸುಲಭವಾಗಿ ಆಟದಂತೆ ನೆರವೇರಿಸುವಿಕೆಯೇ ಆಗಿದೆ. ದೊಡ್ಡದೊಡ್ಡ ಡಾಕ್ಟರುಗಳನ್ನು ಹತ್ತಿರಕರೆದು ಅವರ ಕಣ್ಮುಂದೆಯೇ ಒಬ್ಬನ ನಾಲಿಗೆಯನ್ನು ರಕ್ತದ ಒಂದು ತೊಟ್ಟೂ ಬೀಳದಂತೆ ಬೇರೆಯಾಗಿ ಕತ್ತರಿಸುವುದೂ, ಚೂರನ್ನು ಮೊದಲಿನಂತೆಯೇ ಗುರುತುಕಾಣದಂತೆ ಅಂಟಿಸುವುದೂ ಯಾರನ್ನು ತಾನೇ ತಲೆದೂಗಿಸುವುದಿಲ್ಲ! ಮತ್ತು ತಮ್ಮ ಕಣ್ಣುಗಳನ್ನು ಭದ್ರವಾಗಿ ಮುಚ್ಚಿಕಟ್ಟಿಸಿಕೊಂಡು ಯಾರು ಯಾವ ಗುರುತನ್ನಾಗಲೀ, ಪ್ರಪಂಚದ ಯಾವ ಭಾಷೆಯಲ್ಲೇ ಆಗಲೀ ಏನನ್ನಾದರೂ ಬರೆದರೆ ಅದರಂತೆಯೇ ತಾವು ಬರೆದು ತೋರಿಸುವುದಂತೂ ಪ್ರೇಕ್ಷಕರನ್ನೆಲ್ಲಾ ಮುಗ್ಧಗೊಳಿಸಿಬಿಟ್ಟಿತು. ಇಂತಹ ಅದ್ಭುತ ವಿದ್ಯೆಗಳಿರುವುದರಿಂದಲೇ ನಮ್ಮ ಸರ್ಕಾರರು 'ಜಗದ್ವಿಖ್ಯಾತ ಇಂದ್ರಜಾಲ ವಿದ್ಯಾನಿಪುಣರಲ್ಲಿ ಅಗ್ರಗಣ್ಯ' ರೆಂಬ ಕೀರ್ತಿಪಡೆದಿರುವರು. ಮದರಾಸಿನಲ್ಲಿ ಅವರಿದ್ದಷ್ಟು ದಿನವೂ ಎಲ್ಲೆಲ್ಲಿಯೂ ಸರ್ಕಾರರ ಮಾತೇ. ಸರ್ಕಾರರ ಮಾತಿನೊಂದಿಗೆ ಚಂದಮಾಮನ ಮಾತೂ ಸಹ. ಹೇಗೆಂದರೆ ತಮ್ಮ ಪ್ರದರ್ಶನದಲ್ಲಿ ಒಂದು ಸಾರಿಯೂ ತಪ್ಪದೆ ತಮ್ಮ ಪ್ರಿಯವಾದ ಚಂದಮಾಮನ ಪರಿಚಯ ತಿಳಿಸದೇ ಇರುತ್ತಿರಲಿಲ್ಲ.

ಇಲ್ಲಿ ತಮ್ಮ ಪ್ರದರ್ಶನದ ಕಡೆಯ ದಿನ ಸರ್ಕಾರರು ವಿಶ್ವಾಸಪೂರ್ವಕ ಚಂದಮಾಮ ಕಾರ್ಯಾಲಯಕ್ಕೂ ಭೇಟಿಯಿತ್ತು ಚಂದಮಾಮನ ಸೇವೆಗೆ ತಮ್ಮ ಆಂತರಿಕ ಸಂತೋಷ ವ್ಯಕ್ತಪಡಿಸಿದರು. ಆ ಸಂದರ್ಭದಲ್ಲಿ ನಮ್ಮೆಲ್ಲರಿಗೂ ಸಣ್ಣದಾದರೂ ಆಶ್ಚರ್ಯಕರವಾದ ಒಂದು ಯಕ್ಷಿಣಿ ಮಾಡಿತೋರಿಸಿದರು. ಅದೇನೆಂದರೆ,—ಒಂದು ಮಾರುದ್ದ ಹಗ್ಗವನ್ನು ಕೇಳಿದರು; ಕೊಟ್ಟೆವು. ಅದನ್ನು ಅರ್ಧಕ್ಕೆ ಸರಿಯಾಗಿ ಹಿಡಿದು ಕತ್ತರಿಸೆಂದರು; ಕತ್ತರಿಸಿದೆವು. ಆ ಎರಡು ಚೂರನ್ನೂ ಸೇರಿಸಿ ಗಂಟು ಹಾಕಿ ಸುರುಳಿ ಸುತ್ತಿ ನಮ್ಮ ಕೈಗೆ ಕೊಟ್ಟು ಬಿಚ್ಚಿ ನೋಡಿ ಎಂದರು. ಎಲ್ಲರ ಆಶ್ಚರ್ಯಕ್ಕೂ ಮೊದಲಿನಂತೆ ಮಾರುದ್ದ ಹಗ್ಗವಾಗಿತ್ತು. ಗಂಟೂ ಇಲ್ಲ; ಕತ್ತರಿಸಿದ ಗುರುತು ಮೊದಲೇ ಇಲ್ಲ. ನಾವೆಲ್ಲರೂ ಹತ್ತಿರವೇ ನಿಂತು ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಿದ್ದರೂ ಇದರ ರಹಸ್ಯ ಯಾರಿಗೂ ಈವರೆಗೂ ತಿಳಿಯಲಿಲ್ಲ.

ಆದರೆ "ಚಂದಮಾಮನ ಕುಟುಂಬದಲ್ಲಿ ನಾನೂ ಒಬ್ಬ. ಚಂದಮಾಮನಿಗೂ ನನಗೂ ಮಧ್ಯೆ ರಹಸ್ಯವೇನಿದೆ? ಇಂತಹ ಟ್ರಿಕ್ಕುಗಳನ್ನು ಇನ್ನೂ ಅನೇಕ ಮುಂದಿನ ಚಂದಮಾಮ ಸಂಚಿಕೆಗಳಲ್ಲಿ ಹೇಳುತ್ತೇನೆ" ಎಂದಿದ್ದಾರೆ. ಸರ್ಕಾರರ ಪ್ರೇಮವೂ ಅಭಿಮಾನವೂ ಅಷ್ಟು ಅಗಾಧವಾಗಿ ಇದೆ ಚಂದಮಾಮನ ಮೇಲೆ. ಇದೇ ಸಂದರ್ಭದಲ್ಲಿ ಅವರು ನಿಮಗೆ ಕೊಟ್ಟ 'ಸಂದೇಶ' ಪಕ್ಕದ ಪುಟದದಲ್ಲಿ.

My dear reader-friends of 'Chandamama'

So long I wrote my tricks explaining its secrets through our own Chandamama. During my visit to Madras, I had the pleasure of personally seeing each and every department of this magazine. It is a gigantic organisation where they are scientifically working heart & soul for catering the best offerings to the readers of Chandamama.

I have been fully impressed by their sincere services. I have promised to give my best tricks to you all the readers of Chandamama. Because Chandamama is OUR OWN magazine

P. C. Sorcar

15th March '51

Magician

ಪ್ರಿಯ ಚಂದಮಾಮ ವಾಚಕರೇ,

ಇಷ್ಟುಕಾಲವೂ ನನ್ನ ವಿದ್ಯೆಯ ರಹಸ್ಯಗಳನ್ನು ಪ್ರಿಯ ಚಂದಮಾಮು' ನ ಮೂಲಕ ತಿಳಿಸುತ್ತಾ ಬಂದಿದ್ದೇನೆ. ನನ್ನ ಮದರಾಸು ಪರ್ಯಟನೆಯಲ್ಲಿ ಚಂದಮಾಮ ಕಾರ್ಯಾಲಯಕ್ಕೆ ಭೇಟಿ ಇತ್ತು ಪ್ರತಿಶಾಖೆಯನ್ನೂ ಪರಿಶೀಲಿಸುವ ಭಾಗ್ಯ ನನಗೆ ದೊರಕಿತು. ಆದು ಒಂದು ಬ್ರಹ್ಮಾಂಡವಾದ ಸಂಸ್ಥೆ. ಅತ್ಯುತ್ತಮ ರೀತಿಯಲ್ಲಿ ಅಮೂಲ್ಯ ವಿಷಯಗಳನ್ನು ವಾಚಕರಿಗೆ ತಿಳಿಯಪಡಿಸುವುದಕ್ಕಾಗಿ ಅಲ್ಲಿ ಪ್ರತಿಯೊಬ್ಬರೂ ತಮ್ಮ ಸರ್ವಶಕ್ತಿಯನ್ನೂ ವಿನಿಯೋಗಿಸುತ್ತಿದ್ದಾರೆ.

ಅವರ ಹೃತ್ಪೂರ್ವಕ ಸೇವೆಯು ನನಗೆ ಅತ್ಯಂತ ಆನಂದವನ್ನುಂಟುಮಾಡಿದೆ. ಚಂದಮಾಮು 'ನಮ್ಮ ಪತ್ರಿಕೆ'. ಆದರಿಂದಲೇ ಆದರಮೂಲಕ ಇನ್ನೂ ಎಷ್ಟೋ ಮಹತ್ವದ ಟ್ರಿಕ್ಕುಗಳನ್ನು ತಿಳಿಸುವೆನೆಂದು ಮಾತು ಕೊಟ್ಟಿದ್ದೇನೆ.

15ನೇ ಮಾರ್ಚಿ '51

ಪಿ. ಸಿ. ಸರ್ಕಾರ್.
ಮೆಜಿಷಿಯನ್






ಈ ಚಿತ್ರದಲ್ಲಿ ಎಲ್ಲೆಲ್ಲಿ ಯಾವ ಬಣ್ಣಗಳನ್ನು ಹಾಕಬೇಕೋ ನೋಡಿ ಹಾಕಿರಿ. ಮುಂದಿನ ತಿಂಗಳ ಚಂದಮಾಮದಲ್ಲಿ ನಾವು ಹಾಕುವ ಅದೇ ಬಣ್ಣದ ಚಿತ್ರದೊಂದಿಗೆ ಹೋಲಿಸಿ ನೋಡಿ.

Controlling Editor : SRI CHAKRAPANI
Printed and Published by B. NAGI REDDI, at the B. N. K. Press, Madras-1

